ಎಂ. ಜಿ. ನಂಜುಂಡಾರಾಧ್ಯ

# ಕವಿ ಮುರಾರಿ

ಪ್ರಚಾರಪುಸ್ತಕಮಾಲೆ—೧೬೪



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೦

ಪ್ರಚಾರ ಪುಸ್ತಕಮಾಲೆ-೧೬೪

# ಕವಿ ಮುರಾರಿ

ಎಂ. ಜಿ. ನಂಜುಂಡಾರಾಧ್ಯ





ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೯

ಮೊದಲನೆಯ ಮುದ್ರಣ ೧೯೬೯
೩೦೦೦ ಪ್ರತಿಗಳು



ಬೆಲೆ ಸಾಧಾರಣ ಪ್ರತಿ : ೦–೨೫
ಉತ್ತಮ ಪ್ರತಿ : ೦–೩೭

ಪ್ರಕಾಶಕರು
ಡೈರೆಕ್ಟರ್
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–೬

ಮುದ್ರಕರು
ಮೈಸೂರು ಪವರ್ ಪ್ರೆಸ್
ಅಶೋಕ ರೋಡ್, ಮೈಸೂರು

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ್ನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನುಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು

ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ನಮ್ಮ ಸಮಾಜ ದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾ ಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆ ಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನಮನೆ ಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದು ತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರಅರವತ್ತ ಮೂರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಎಂ. ಜಿ. ನಂಜುಂಡಾರಾಧ್ಯರ "ಕವಿ ಮುರಾರಿ" ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ.

ಕೆ. ಎಲ್. ಶ್ರೀಮಾಲಿ

ವೈಸ್-ಛಾನ್ಸಲರ್

# ಮೊದಲ ಮಾತು

ಸಾಹಿತ್ಯ ಕ್ಷೇತ್ರದಲ್ಲಿ ನಾಟಕಕ್ಕೆ ಪ್ರಧಾನ ಸ್ಥಾನವಿದೆ. ವಿಭಿನ್ನ ಅಭಿರುಚಿಯುಳ್ಳ ಜನರಿಗೆ ನಾಟಕ ಒಂದು ಸಮಾರಾಧನೆ. ಅನೇಕ ವಿಧವಾದ ವ್ಯಂಜನಗಳಿಂದ ಕೂಡಿದ ಸಮಾರಾಧನೆಯು ವಿವಿಧ ರುಚಿಯನ್ನು ಬಯಸುವ ಜನತೆಯನ್ನು ತಣಿಸುವಂತೆ, ರಸ ಭಾವಾದಿ ಅನೇಕ ಸನ್ನಿವೇಶಗಳಿಂದ ಅಲಂಕೃತವಾದ ನಾಟಕವು ಸಹೃದಯರನ್ನು ಅಲೌಕಿಕಾನಂದಾಮೃತದ ಕಡಲಿನ ಬೆಳ್ದೆರೆಗಳಲ್ಲಿ ಮಿಾಯಿಸಿ ಬ್ರಹ್ಮಾನಂದದೆಡೆಗೊಯ್ಯುವುದೆಂದು ಆಲಂಕಾರಿಕರು ನಿಶ್ಚಯಿಸಿರುವರು.

ನಾಟಕದ ಪ್ರಾದುರ್ಭಾವದ ಕಾಲಮಾನದ ವಿಷಯದಲ್ಲಿ ಸಂಶೋಧಕರಲ್ಲಿ ವಿಭಿನ್ನ ಅಭಿಪ್ರಾಯಗಳಿವೆ. ಗ್ರೀಕ್‌ನಾಟಕ ಮತ್ತು ಸಂಸ್ಕೃತ ನಾಟಕ ಕಲೆಗಳಲ್ಲಿ ಯಾವುದು ಮೊದಲನೆಯದೆಂಬುದು ನಿರ್ಧಾರವಾಗಿಲ್ಲ. ಆದರೂ ಸಂಸ್ಕೃತನಾಟಕವು ಸುಮಾರು ೧ನೆಯ ಶತಮಾನದ ಹೊತ್ತಿಗೇ ಒಂದು ಗೊತ್ತಾದ ರೂಪಕ್ಕೆ ಬಂದಿದ್ದಿತೆಂಬುದಕ್ಕೆ ಆಧಾರಗಳು ದೊರೆಯುತ್ತವೆ. ಅಲ್ಲಿಂದೀಚೆಗೆ ಅಶ್ವಘೋಷ, ಭಾಸ, ಕಾಳಿದಾಸ ಮತ್ತು ಭವಭೂತಿ ಮುಂತಾದ ಉದ್ದಾಮ ಕವಿಗಳು ತಮ್ಮ ಅನುಪಮ ಭಾವವೈಭವವನ್ನು ತಮ್ಮ ತಮ್ಮ ಕೃತಿರತ್ನಗಳಲ್ಲಿ ಅಡಗಿಸಿ ಸಾಹಿತ್ಯಸರಸ್ವತಿಯ ಮಕುಟವನ್ನಲಂಕರಿಸಿದ್ದಾರೆ. ಅವರ ಉಜ್ವಲ ಪ್ರತಿಭೆಯ ವಿದ್ಯುತ್ ಪ್ರವಾಹವು ನಿಖಿಲ ಸಾಹಿತ್ಯಗಳಲ್ಲಿಯೂ ನಾನಾಮುಖವಾಗಿ ಹರಿದು ಅವುಗಳಿಗೆ ಚೈತನ್ಯ

ವನ್ನು ನೀಡಿದೆ, ಬೆಳಗಿಸಿದೆ. ಅವರ ಕೃತಿಗಳು ಸಾಹಿತ್ಯೋದ್ಯಾನದಲ್ಲಿ ಸಂಚರಿಸುವ ಸಹೃದಯರಿಗೆ ಹಾದಿತೋರುವ ವಿದ್ಯುತ್ ಸ್ತಂಭಗಳಂತೆ ವಿರಾಜಮಾನವಾಗಿವೆ.ಅನೇಕಮಂದಿ ಸಾಹಿತ್ಯೋಪಾಸಕರಿಗೆ ಜೀವಿಕೆಗಳೂ ಆಗಿವೆ.

ಹಿಂದೊಮ್ಮೆ ಸಂಸ್ಕೃತ ಸಾಹಿತ್ಯ ಕಲ್ಪಲತೆಯು ನಾನಾ ಮುಖವಾಗಿ ಕುಡಿಯೊಡೆದು ಕುಸುಮಿಸಿ ತನ್ನ ಆಪ್ಯಾಯಮಾನವಾದ ಭಾವಸೌರಭದಿಂದ ರಸಿಕ ಷಟ್‌ಪದಗಳನ್ನು ಆಕರ್ಷಿಸಿತು. ಅದರ ಫಲವೆ ರಸದೊಸರು ನಾಟಕ. ಆ ಫಲದ ಯೌವನ ದೆಶೆಯೂ ಬರುಬರುತ್ತಾ ಬರಡಾಗಿ, ಶುಷ್ಕ ಮತ್ತು ನೀರಸವಾದ ಹಣ್ಣಿನ ಆಕಾರವನ್ನು ತೋರಿಸಿದ ಕಾಲವೂ ಇಷ್ಟುಹೊತ್ತಿಗೆ ಮುಗಿಯುತ್ತ ಬಂದಿದೆಯೆಂದು ಸಂಸ್ಕೃತ ಸಾಹಿತ್ಯಚರಿತ್ರೆಯಿಂದ ಸ್ಪಷ್ಟವಾಗಿದೆ.ಆದರೆ ಇಷ್ಟರಿಂದ ಆ ಫಲಗಳಿಂದ ಪ್ರಯೋಜನವಿಲ್ಲವೆಂದು ಹೊರನೂಕುವುದು ಉಚಿತವಾಗದು. ಅನೇಕವೇಳೆ ಅಂತಹ ಕೃತಿಗಳು ಕಾಬೂಲುದ್ರಾಕ್ಷೆಯಂತೆ ರಸಬಾಳೆಯ ಹಣ್ಣಿನಂತೆ ಬಹಿರಂತಃಸ್ಫುರದ್ರಸಗಳಲ್ಲದಿದ್ದರೂ ಅವು ಒಣ ಅಂಜೂರದಂತೆ ಪೌಷ್ಟಿಕ ವಸ್ತುಗಳಿಂದ ಬೆಲೆ ಪಡೆದಿವೆ. ಅದರಂತೆಯೇ ಕೆಲವು ಸಂಸ್ಕೃತನಾಟಕಗಳಲ್ಲಿ ಭಾವವೈಭವದ ಬೆಡಗಿಲ್ಲದಿದ್ದರೂ ವ್ಯುತ್ಪಾದಕತೆಯ ತಿರುಳಿದೆ. ಈ ದೃಷ್ಟಿಯಿಂದ ಕೆಲವು ಕೃತಿಗಳು ಜೀವಧಾರಣೆ ಮಾಡಿವೆ. ಕಾವ್ಯವುದಿಸಲು ಕವಿಯ ಜೀವನದಲ್ಲಿ ಕಾವಿರಬೇಕು. ಅದು ಸನ್ನಿವೇಶಗಳಿಂದ ಕಾಯ್ದು ಪರಿಪಕ್ವವಾಗಿರಬೇಕು. ಇಲ್ಲದಿದ್ದರೆ ಕಾವ್ಯ ಪಾಂಡಿತ್ಯಭಾರದಿಂದ ಬಳುಕಿ ಓದುಗರನ್ನು ಬಳಲಿಸುತ್ತದೆ. ಆದರೂ ಸಾಹಿತ್ಯ ಸಾಮ್ರಾಜ್ಯದಲ್ಲಿ ಪಾಂಡಿತ್ಯ ಪ್ರತಿಭೆಗಳಿಗೆ ಅನುಗುಣವಾದ ಸ್ಥಾನವು ಮುಡಿಪಾಗಿದೆ. ಸಾಹಿತ್ಯದೇವಿಯ ಚರಣಾರಾಧನೆಗೆ ಪಾಂಡಿತ್ಯ

ಕುಸುಮಗಳೂ ಸಮುಚಿತಸ್ಥಾನದಲ್ಲಿ ಮಂಡನಾರ್ಹವಾಗುತ್ತವೆ. ಈ ದೃಷ್ಟಿಯಿಂದ ಮುರಾರಿ ಕವಿಯ **ಅನರ್ಘರಾಘವವು** ಉಪಾದೇಯವೆನಿಸಿದೆ. ಅದರ ಸ್ಥೂಲ ಪರಿಚಯವನ್ನು ಇಲ್ಲಿ ಕೊಡಲಾಗಿದೆ.

೨೦-೩-೧೯೬೯
ಮೈಸೂರು

**ಎಂ. ಜಿ. ನಂಜುಂಡಾರಾಧ್ಯ**

# ಕವಿ ಮುರಾರಿ

"ಮುರಾರೇಃ ತೃತೀಯಃ ಪಂಥಾಃ" ಎಂಬ ಅಗ್ಗಳಿಕೆಯ ಪ್ರಶಸ್ತಿಯನ್ನು ಕವಿಲೋಕದಲ್ಲಿ ಗಳಿಸಿದ ಕವಿ ಮುರಾರಿಯ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುವುದು ಅಗತ್ಯ. ಪ್ರಾಚೀನ ಕವಿಗಳ ಕೃತಿಗಳನ್ನು ಅರಗಿಸಿಕೊಂಡ ನಮ್ಮವರು ಒಬ್ಬೊಬ್ಬ ಕವಿಯಲ್ಲಿ ಒಂದೊಂದು ವಿಶೇಷ ಗುಣವನ್ನು ನಿರೂಪಿಸಿ ಪ್ರಶಂಸಿಸುತ್ತಿದ್ದರು. ಹಾಸ್ಯದಲ್ಲಿ ಭಾಸ, ಉಪಮೆಯಲ್ಲಿ ಕಾಳಿದಾಸ, ಅರ್ಥಗಾಂಭೀರ್ಯದಲ್ಲಿ ಭಾರವಿ, ಲಲಿತ ಪದಸಂಯೋಜನೆಯಲ್ಲಿ ದಂಡಿ, ಕರುಣರಸ ನಿರೂಪಣದಲ್ಲಿ ಭವಭೂತಿ – ಹೀಗೆ. ಇದರಂತೆ ವ್ಯುತ್ಪಾದಕದೃಷ್ಟಿಯಿಂದಲೂ ಕೆಲವು ವಿಭಾಗಗಳನ್ನು ಮಾಡಿದ್ದಾರೆ.

**"ನವಸರ್ಗೇ ಗತೇ ಮಾಘೇ ನವಶಬ್ದೋ ನ ವಿದ್ಯತೇ"**
**"ಬಾಣೋಚ್ಛಿಷ್ಟಂ ಜಗತ್ಸರ್ವಮ್"**
**"ನೈಷಧಂ ವಿದ್ವದೌಷಧಮ್"**

ಎಂಬ ಉಕ್ತಿಗಳು ಭಾರತೀಯ ಸಹೃದಯ ವಿದ್ವಾಂಸರ ಅಭಿರುಚಿ ವೈವಿಧ್ಯಕ್ಕೆ ನಿದರ್ಶನಗಳು. ಈ ಪಂಕ್ತಿಯಲ್ಲಿ ಕವಿ ಮುರಾರಿಯ ಬಗ್ಗೆಯೂ ಕೆಲವು ಉಕ್ತಿಗಳು ವಿದ್ವಲ್ಲೋಕದಲ್ಲಿ ಬಳಸಲ್ಪಡುತ್ತವೆ.

"ಮುರಾರಿ ಪದ ಚಿಂತಾಯಾಂ ಭವಭೂತೇಸ್ತು ಕಾ ಕಥಾ ?
ಭವಭೂತಿಂ ಪರಿತ್ಯಜ್ಯ ಮುರಾರಿಮುರರೀ ಕುರು"

ಮುರಾರಿ ಕವಿಯ ಪದಸಂಯೋಜನೆಯ ವೈಭವವನ್ನು ಪರ್ಯಾಲೋಚಿಸಿದಲ್ಲಿ ಭವಭೂತಿ ಎಷ್ಟರವನು ? ಎಂದರೆ ಭವಭೂತಿಯು ರಾಮಾಯಣ ಕಥಾವಸ್ತುವನ್ನು ಕುರಿತು ಬರೆದಿರುವ **"ಮಹಾವೀರಚರಿತ್ರೆ"** ಮತ್ತು ಮುರಾರಿ ಕವಿ ಅದೇ ಕಥಾವಸ್ತುವನ್ನು ಅಧಿಕರಿಸಿ ರಚಿಸಿರುವ **"ಅನರ್ಘ ರಾಘವ"** ಈ ನಾಟಕಗಳಲ್ಲಿ ಒಂದು ದೃಷ್ಟಿಯಿಂದ ಕವಿ ಮುರಾರಿಗೇ ಪ್ರಾಶಸ್ತ್ಯವೆಂಬ ಭಾವ. ಮತ್ತೊಂದು ದೃಷ್ಟಿಯಿಂದ ಭವಭೂತಿ ಎಂದರೆ ಶಿವ; ಮುರಾರಿ – ವಿಷ್ಣು. ಹೀಗೆ ಶಿವ ಕೇಶವರಲ್ಲಿ ಮುರಾರಿಯೇ ಶ್ರೇಷ್ಠ ಎಂಬುದು ಧ್ವನಿ! **"ಮುರಾರಿ ಪದಚಿಂತಾ ಚೇತ್ ತದಾ ಮಾಘೇ ಮತಿಂ ಕುರು"** ಎಂಬುದನ್ನು ಮೇಲಿನ **"ನವ ಸರ್ಗೇ ಗತೇ ಮಾಘೇ"** ಎಂಬ ಉಕ್ತಿಯೊಡನೆ ಹೋಲಿಸಿ ನೋಡಿ! ವ್ಯುತ್ಪಾದಕ ದೃಷ್ಟಿಯಿಂದ ಮಾಘ ಮತ್ತು ಕವಿ ಮುರಾರಿಗಳಿಗೆ ಇರುವ ಹೋಲಿಕೆ ಇಲ್ಲಿ ವ್ಯಕ್ತವಾಗಿದೆ. ಇವು ಸಾಮಾನ್ಯವಾದ ಹೋಲಿಕೆಗಳು. ಆದರೆ ಮುರಾರಿ ಕವಿಗೆ ದೊರೆತಿರುವ ಅಗ್ಗಳಿಕೆಯ ಪ್ರಶಸ್ತಿ **"ಮುರಾರೇಃ ತೃತೀಯಃ ಪಂಥಾಃ"** ಎಂದರೆ **"ಮುರಾರಿಯ ಮೂರನೆಯ ದಾರಿ"** ಎಂಬುದು. ಇದು ಮುರಾರಿಯಲ್ಲಿರುವ ಅನಿತರ ಸಾಧಾರಣವಾದ ಒಂದು ವಿಶಿಷ್ಟ ವ್ಯಕ್ತಿತ್ವಕ್ಕೆ ಸಂಬಂಧಿಸಿದುದು. ಮುರಾರಿಕವಿಯ ಕಾವ್ಯಾಭ್ಯಾಸ ಹಾಗೂ ಆತನ ಕಾವ್ಯಸೃಷ್ಟಿ ವಿಧಾನವು ಇತರ ಕವಿಗಳಿಗಿಂತ ವಿಲಕ್ಷಣವಾದುದೆಂಬುದು ತಾತ್ಪರ್ಯ.

## ಕವಿ ಪರಿಚಯ

ಕ್ರಿ.ಶ. ಸು. ೯ನೆಯ ಶತಮಾನಕ್ಕೆ ಸೇರಿದ ರಾಜಾನಕ ರತ್ನಾಕರನ " ಹರವಿಜಯ " ದಲ್ಲಿ

ಅಂಕೋತ್ಥ (ಅಂಕೇsಥ) ನಾಟಕ ಇವೋತ್ತಮನಾಯಕಸ್ಯ
ನಾಶಂ ಕವಿರ್ವ್ಯಧಿತ ಯಸ್ಯ ಮುರಾರಿರಿತ್ಥಮ್।
ಆಕ್ರಾಂತ ಕೃತ್ಸ್ನ ಭುವನಃ ಕ್ವಗತಃ ಸದೈತ್ಯ
ನಾಥೋಃ ಹಿರಣ್ಯಕಶಿಪುಃ ಸಹ ಬಂಧುಭಿರ್ವಃ।

(೩೮–೬೭)

ಎಂಬ ಶ್ಲೋಕವಿದೆ. ಇದರಲ್ಲಿ ' ಅಂಕ ಉತ್ಸಂಗೇ ' ' **ಮುರಾರಿರ್ವಿಷ್ಣುಃ**' ಎಂಬ ಪ್ರಕೃತಾರ್ಥವಿದ್ದರೂ ರತ್ನಾಕರ ಕವಿಯು ಅಂಕ – ನಾಟಕ ಕವಿ – ಮುರಾರಿ ಶಬ್ದಗಳನ್ನು ಪ್ರಯತ್ನಪೂರ್ವಕವಾಗಿ ನಿವೇಶಮಾಡಿ ಮುರಾರಿಯ ಹೆಸರನ್ನು ಭಂಗ್ಯಂತರದಿಂದ ನಿರೂಪಿಸಿರುವುದರಿಂದಲೂ, ಭವಭೂತಿಯ (ಕ್ರಿ.ಶ. ೭ನೆಯ ಶತಮಾನ) ' ಮಹಾವೀರ ಚರಿತ್ರೆ ' ಯನ್ನು ಬಹಳವಾಗಿ ಅನುಸರಿಸಿರುವುದರಿಂದಲೂ ಈತನು ಇವರಿಬ್ಬರ (ರತ್ನಾಕರ ಮತ್ತು ಭವಭೂತಿ) ಮಧ್ಯಕಾಲದವನೆಂದು ಹೇಳುವುದರಲ್ಲಿ ಸಂದೇಹವಿರುವುದಿಲ್ಲ. ಮೌದ್ಗಲ್ಯಗೋತ್ರ, ಭಟ್ಟವರ್ಧಮಾನ ಮತ್ತು ತಂತುಮತಿಯರು ತಂದೆ ತಾಯಿಗಳು ಎಂದು " ಮೌದ್ಗಲ್ಯ ಗೋತ್ರ ಸಂಭವಸ್ಯ ಮಹಾಕವೇರ್ಭಟ್ಟ ವರ್ಧಮಾನ ತನೂಜನ್ಮನಸ್ತಂತುಮತೀ ನಂದನಸ್ಯ ಮುರಾರೇಃ " ಕವಿ ಹೇಳಿಕೊಂಡಿದ್ದಾನೆ. ಸ್ಥಳ : ' **ಹಿಂದೂ ಮಾಹಿಷ್ಮತಿ** ' ಇರಬಹುದೆಂದು ಊಹೆ. *

---

* ಸಂಸ್ಕೃತ ನಾಟಕ ಡಾ|| ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟನೆ ೧೯೩೭, ಪು. ೨೩೨.

## ಕವಿಯ ಮತ

ಕವಿಯು ತನ್ನ ಕಾವ್ಯದಲ್ಲಿ ಶಿವನ ವರ್ಣನೆ ಬರುವ ಸಂದರ್ಭಗಳಲ್ಲಿ ಅನೇಕ ಕಡೆ ಮೃದು ಹಾಸ್ಯದಿಂದಲೇ ಮಾತ ನಾಡುತ್ತಾನೆ. ಶಿವನಿರ್ಮಾಲ್ಯನಿಷೇಧ ಮುಂತಾದುವನ್ನು ಸೂಚಿಸುತ್ತಾನೆ. ಆದರೂ ಈತನು ಶಿವನಲ್ಲಿ ಭಕ್ತಿಭಾವವುಳ್ಳ ವೈಷ್ಣವನಿರಬಹುದೆಂದು ಸಮಗ್ರ ಕಾವ್ಯ ವಿಮರ್ಶೆಯಿಂದ ತಿಳಿದು ಬರುತ್ತದೆ. ಮಂಗಳಪದ್ಯಗಳು ವಿಷ್ಣುವನ್ನು ಅಧಿಕರಿಸಿವೆ.

## ರಚನಾ ಶಕ್ತಿ

ಮುರಾರಿಯ ಕಾವ್ಯವನ್ನು ಮಥಿಸಿ ರಸಾಸ್ವಾದನೆ ಮಾಡ ಬೇಕು. ಆದರೆ ಮುರಾರಿಯ ಕಾವ್ಯ ಸುಮ್ಮನೆ ಔದಾಸೀನ್ಯದಿಂದ ಮೇಲೆ ಮೇಲೆ ಓದಿದರೆ ಅರಗುವುದಲ್ಲ.

> ದೇವೀಂ ವಾಚಮುಪಾಸತೇಹಿ ಬಹವಃ ಸಾರಂ ತು ಸಾರಸ್ವತಂ
> ಜಾನೀತೇನಿತರಾಮಸೌ ಗುರುಕುಲ ಕ್ಲಿಷ್ಟೋ ಮುರಾರಿಃ ಕವಿಃ।
> ಅಬ್ಧಿರ್ಲಂಘಿತ ಏವ ವಾನರಭಟೈಃ ಕಿಂತ್ವಸ್ಯ ಗಂಭೀರತಾ
> ಮಾಪಾತಾಲನಿಮಗ್ನಪೀವರತನುರ್ಜಾನಾತಿ ಮಂಥಾಚಲಃ ॥

ಸಮುದ್ರದ ತಳದಲ್ಲಿರುವ ಅಮೂಲ್ಯವಾದ ರತ್ನರಾಶಿಯ ಪರಿಚಯವು ಪಾತಾಳದವರೆಗೆ ಇಳಿದು ಅಲ್ಲಿ ವಿಸ್ತಾರವಾಗಿ ಹರಡಿ ರುವ ಮಂದರಪರ್ವತಕ್ಕೆ ತಿಳಿದಿದೆಯಲ್ಲದೆ ಮೇಲೆ ಮೇಲೆ ಕಡಲನ್ನು ಹಾರಿದ ಕಪಿಗಳಿಗೆ ತಿಳಿಯುವುದು ಸಾಧ್ಯವೆ?

ಇದರಂತೆ ಮುರಾರಿಯು ಇತರ ಕವಿಗಳಂತೆ ವಾಗ್ದೇವಿಯ ಉಪಾಸನಾದಿಗಳಿಂದ ಆದ ಕವಿಯಲ್ಲ. ಅವನು ಗುರುಕುಲದಲ್ಲಿ ಕ್ರಮವಾಗಿ ಅಭ್ಯಾಸಮಾಡಿ ಸಾಹಿತ್ಯಸಾಗರದ ಸಾರಸರ್ವಸ್ವವನ್ನೂ ಸೂರೆಗೊಂಡವನು. ಮುರಾರಿಯು "ನಡೆದುದೆ ಮಾರ್ಗಂ, ಪದಮಿಡಲೊಡರಿಸಿದುದೆ ಭಂಗಿ" ಎಂಬ ಕವಿಕೇಶವನ ಉಕ್ತಿಯಂತೆ ಗರ್ಜಿಸಿ ತನ್ನದೇ ಆದ ಹಾದಿಯನ್ನು ರಚಿಸಿದ್ದಾನೆ.

**"ಬಾಣೋಚ್ಛಿಷ್ಟಂ ಜಗತ್ಸರ್ವಂ"** ಎಂಬ ನುಡಿಗೆ ಸಾರಸ್ವತ ಸಾಮ್ರಾಜ್ಯದಲ್ಲಿ ಅಪವಾದವೆನಿಸಿದವನು ಬಹಳ ಮಟ್ಟಿಗೆ ಮುರಾರಿಯೊಬ್ಬನೇ ಎಂದರೂ ಆತನಿಗೆ ಸಲ್ಲುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ಅನೇಕ ಕವಿಗಳು ಹಿಂದಿನವರು ಹೇಳಿದುದನ್ನೇ ಹೇಳಿ ಹೇಳಿ ಓದುಗರ ತಲೆ ಕೆಡಿಸಿರುತ್ತಾರೆ. ಅವರಲ್ಲಿ ಮುರಾರಿಯು ಮಾತ್ರ ಮೂರನೆಯ ದಾರಿಯನ್ನು ಕಲ್ಪಿಸಿ **'ಅನ್ಯಮಿಂದ್ರಂಕರಿಷ್ಯಾಮಿ'**ಎಂದ ಸಾಹಸಿ ಮಂತ್ರದ್ರಷ್ಟಾರ ಋಷಿ ವಿಶ್ವಾಮಿತ್ರನಂತೆ ಸಾಹಿತ್ಯಲೋಕದಲ್ಲಿ ವಿಜೃಂಭಿಸಿದ್ದಾನೆ.

'.... .... .... .... ತೃತೀಯಃ ಪಂಥಾಃ. ಎಂಬ ನುಡಿ **ಕುಮಾರಿಲ ಭಟ್ಟ, ಪ್ರಭಾಕರ** ಮತ್ತು **ಮುರಾರಿ** ಎಂಬ ಮೂವರು ಮೀಮಾಂಸಕರಲ್ಲೊಬ್ಬನಾದ "ಮುರಾರಿ"ಗೆ ಅನ್ವಯಿಸುವುದೆಂಬ ಮಾತು ನಮಗಿಲ್ಲಿ ಪ್ರಸ್ತುತವಲ್ಲ. ಅದು ವಿಲಕ್ಷಣ ಪದಪ್ರಯೋಗ ಮತ್ತು ಕಾವ್ಯಸರಣಿಯಲ್ಲಿ ಪಳಗಿದ ಕವಿ ಮುರಾರಿಯ 'ಅನರ್ಘರಾಘವ' ವನ್ನು ಉದ್ದೇಶಿಸಿಯೇ ಬಳಕೆಯಲ್ಲಿರುವುದು ಹೆಚ್ಚು ಸಹಜ. ಅವನ ವರ್ಣನೆ, ಕಾವ್ಯ ರಚನಾ ಕೌಶಲ್ಯಗಳು ಇದಕ್ಕೆ ನಿದರ್ಶನವಾಗಿವೆ.

**ಕಥಾವಸ್ತು**

ಮುರಾರಿ ಕವಿಯು ಆರಿಸಿಕೊಂಡಿರುವ ಕಥಾವಸ್ತು ಪ್ರಖ್ಯಾತ. ಭರತಖಂಡದ ಇತಿಹಾಸದಲ್ಲಿ ಶಿರೋಮಣಿ ಪ್ರಾಯವಾದ ರಾಮಾಯಣ ಮಹಾಕಾವ್ಯ, ಆದಿಕವಿ ವಾಲ್ಮೀಕಿಯ ಶೋಕವು ಶ್ಲೋಕತ್ವ ಹೊಂದಿ ಅವನ ಹೃದಯ ವೀಣೆಯಿಂದ ಮಿಡಿದ ನುಡಿ, ಆದಿಕಾವ್ಯವಾಯಿತು. ಮುರಾರಿಯು ತನ್ನ ತೃತೀಯ ಪಂಥವನ್ನು ಎಲ್ಲ ವಿಷಯಗಳಲ್ಲಿಯೂ ದುರುಪಯೋಗ ಪಡಿಸಿಕೊಳ್ಳದೆ ಭಾರತೀಯ ಸಾಹಿತ್ಯದ ಕಣ್ಣಿನಂತಿರುವ ಈ ರಾಮಾಯಣವನ್ನೇ ಅವಲಂಬಿಸಿ ಕಾವ್ಯರಚನೆ ಮಾಡಿದ್ದಾನೆ. ಅಲ್ಲದೆ, ಆತನಿಗಿಂತ ಹಿಂದೆ ಇದ್ದ ಭವಭೂತಿಯ ಮಹಾವೀರ ಚರಿತ್ರೆಯಿಂದ ಬೇಕಾದಷ್ಟು ವಿಷಯ ಸಂಗ್ರಹ ಮಾಡಿದ್ದಾನೆ. ಆದರೂ ಆತ ತನ್ನದೇ ಆದ ವಿಶಿಷ್ಟರೀತಿಯಲ್ಲಿ ಅದನ್ನು ಬಳಸಿಕೊಂಡು ತನ್ನ ಪಡಿಯಚ್ಚಿನಲ್ಲಿ ಎರಕಹೊಯ್ದಿದ್ದಾನೆ. ಈ ಕೃತಿಯ ಲೋಕೋತ್ತರತ್ವಕ್ಕೆ 'ತಿರ್ಯಕ್ಪ್ರಾಣಿಗಳಿಂದಲೂ ಸಹಾಯವನ್ನು ಪಡೆದ ನ್ಯಾಯಪ್ರವೃತ್ತನಾದ ಶ್ರೀ ರಾಮಚಂದ್ರನ' ಉದಾತ್ತತೆಯನ್ನೇ ಆದರ್ಶವಾಗಿಟ್ಟುಕೊಂಡಿರುವುದೇ ಕಾರಣವಾಗಿದೆ.

ಯಾಂತಿ ನ್ಯಾಯ ಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಮ್।
ಅಪಂಥಾನಂತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥
[೧-೪]

'ನ್ಯಾಯವಾದ ದಾರಿಯಲ್ಲಿರುವವನಿಗೆ ಪಶು ಪಕ್ಷ್ಯಾದಿ ತಿರ್ಯಕ್ ಜಂತುಗಳೂ ಸಹಾಯಮಾಡುತ್ತವೆ. ಆದರೆ ದಾರಿ ತಪ್ಪಿ ನಡೆಯುವವನನ್ನು ಒಡಹುಟ್ಟಿದವರೂ ಕೈಬಿಡುತ್ತಾರೆ.'

ಆದ್ದರಿಂದಲೇ ಮುರಾರಿ ಕವಿಯು ಅಂಥ ಶ್ರೀ ರಾಮ ಚಂದ್ರನ ಪುಣ್ಯಕತೆಯನ್ನೇ ಹೇಳಲು ನಿರ್ಧರಿಸಿದುದು. ಅಲ್ಲದೆ ಹಳೆಯ ರಾಮಕಥೆಯನ್ನೇ ತಾನೂ ಆರಿಸಿಕೊಂಡಿರುವುದಕ್ಕೆ ಆತ ಈ ರೀತಿ ಉತ್ತರಿಸಿಯೂ ಇದ್ದಾನೆ.

ಯದಿ ಕ್ಷುಣ್ಣಂ ಪೂರ್ವೈರಿತಿ ಜಹತಿ ರಾಮಸ್ಯ ಚರಿತಂ
ಗುಣೈರೇತಾವದ್ಭಿರ್ಜಗತಿ ಪುನರನ್ಯೋ ಜಯತಿ ಕಃ।
ಸ್ವಮಾತ್ಮಾನಂ ತತ್ತದ್ಗುಣಗರಿಮಗಂಭೀರಮಧುರ
ಸ್ಫುರದ್ವಾಗ್ಬ್ರಹ್ಮಾಣಃ ಕಥಮುಪಕರಿಷ್ಯಂತಿ ಕವಯಃ॥
(೧-೯)

'ರಾಮಚರಿತೆಯನ್ನು ಹಿಂದೆ ಎಷ್ಟೋಜನ ಬರೆದಿದ್ದಾರೆ ಎಂಬ ಕಾರಣಕ್ಕಾಗಿ ನಾವು ಅದನ್ನು ಬಿಡುವುದಾದರೆ ಇಂಥ ಲೋಕೋತ್ತರವಾದ ಗುಣಗಳಿಂದ ಭೂಷಿತನಾದವನು ಬೇರೆ ಯಾರಿದ್ದಾನೆ? ಕಥಾನಾಯಕನನ್ನು ಕೈಬಿಟ್ಟಪಕ್ಷದಲ್ಲಿ ನಾಯಕನ ಗಂಭೀರವಾದ ಗುಣಗಳಿಗೆ ಪರವಶರಾಗಿ ತಮ್ಮ ಪ್ರತಿಭೆಯಿಂದ ಮೃದು ಮಧುರ ಪದ_ಅರ್ಥ ಭಾವ ವೈಭವವನ್ನು ಬಿತ್ತರಿಸುವ ವಾಕ್ ವೈದಗ್ಧ್ಯವುಳ್ಳ ಕವಿಗಳು ಕೀರ್ತಿ ಗಳಿಸುವುದಾದರೂ ಹೇಗೆ' ಎಂಬ ಆತನ ಮಾತು ಕವಿಗೆ ಶ್ರೀರಾಮಚಂದ್ರನಲ್ಲಿರುವ ಗುಣಪಕ್ಷಪಾತಕ್ಕೆ ನಿದರ್ಶನವಾಗಿದೆ. ಕೆಲವು ವಿಷಯಗಳಲ್ಲಿ ರಾಮಕಥೆಯನ್ನು ಜೈನಾಗಮದಂತೆ ತಿರುಗಿಸಿ ಬರೆದ ನಾಗ ಚಂದ್ರನು (ಕ್ರಿ.ಶ. ಸುಮಾರು ೧೧೪೦)

ನಾಯಕನನ್ಯನಾಗೆ ಕೃತಿ ವಿಶ್ರುತ ಮಾಗದುದಾತ್ತರಾಘವಂ
ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು ಕಾ।

ಲಾಯುಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನ ಮಾಲೆಯಂತುಪಾ
ದೇಯಮೆನಿಕುಮೇ ವಿಷಯಮೊಪ್ಪದೊಡಾವುದು
ಮೊಪ್ಪಲಾರ್ಕುಮೇ ॥

ಎಂದು ಹೇಳಿರುವುದು ಮುರಾರಿಯ ಮಾತಿನ ನೆರಳಿ ನಂತಿದೆ.

## ಅನರ್ಘ ರಾಘವ

ಈ ನಾಟಕವು ಮಧ್ಯದೇಶೀಯನಾದ 'ಸುಚರಿತ' ನಿಂದ ಪುರುಷೋತ್ತಮನ ಯಾತ್ರೆಯ ಸಂದರ್ಭದಲ್ಲಿ ಪ್ರಯೋಗಿಸಿದುದು. ಇದರಲ್ಲಿ ಏಳು ಅಂಕಗಳಿವೆ.

**ಅಂಕಗಳ ಮುಖ್ಯಾಂಶಗಳು :**

೧. ವಿಶ್ವಾಮಿತ್ರನು ರಾಮ ಲಕ್ಷ್ಮಣರನ್ನು ಯಜ್ಞ ರಕ್ಷಣೆಗಾಗಿ ಕರೆತರುವುದು.

೨. ತಾಟಕಾ ಸಂಹಾರ, ಜೃಂಭಕಾಸ್ತ್ರ ಪ್ರದಾನ.

೩. ಜನಕನ ಅರಮನೆಯಲ್ಲಿ ರಾಜಪುತ್ರಿಯರ ಮದುವೆಯ ವಿಷಯದಲ್ಲಿ ಪುರೋಹಿತ ಶತಾನಂದನೊಡನೆ ಸಮಾಲೋಚಿಸುತ್ತಿರುವಾಗ ರಾಮ ಲಕ್ಷ್ಮಣರೊಂದಿಗೆ ವಿಶ್ವಾಮಿತ್ರನ ಆಗಮನ. ರಾಮನ ಪರಾಕ್ರಮ ಪ್ರಶಂಸೆ. ರಾವಣ ಪುರೋಹಿತನಾದ ಶೌಷ್ಕಲನು ಜನಕನಲ್ಲಿ ರಾವಣನಿಗಾಗಿ ಸೀತೆಯನ್ನು

ಯಾಚಿಸುವುದು. ಅವನೆದುರಿನಲ್ಲಿಯೇ ಹರಧನುರ್ಭಂಗ, ದಶರಥ ಪುತ್ರರಾದ ರಾಮಾದಿಗಳಿಗೆ ಸೀತೆ ಮೊದಲಾದ ಕನ್ಯೆಯರನ್ನು ಕೊಡುವ ಬಗ್ಗೆ ನಿಶ್ಚಯವಾಗಿ ಶೌಷ್ಕಲನು ಮತ್ಸರಗೊಂಡು ಹಿಂದಿರುಗುವುದು.

೪. ವಿಷ್ಕಂಭಕದಲ್ಲಿ ಮಾಲ್ಯವಂತ ಮತ್ತು ಶೂರ್ಪನಖಿಯರ ಪಿತೂರಿ. ಸೀತಾಪಹರಣಕ್ಕಾಗಿ ಅವರ ದುರಾಲೋಚನೆಗಳು ಮತ್ತೊಂದು ಕಡೆ ಧರ್ಮದ್ರೋಹಿಯಾದ ವಾಲಿಯನ್ನು ಕೊಲ್ಲಿಸಿ ಸುಗ್ರೀವನನ್ನು ಪಟ್ಟಕ್ಕೇರಿಸಲು ಜಾಂಬವಂತನು ಶ್ರಮಣೆಯನ್ನು ಮಂಥರೆಯಲ್ಲಿ ಪ್ರವೇಶಿಸಿ ಕೈಕೇಯಿಗೆ ದುರುಪದೇಶ ಮಾಡಿಸಿ ರಾಮನನ್ನು ಕಾಡಿಗಟ್ಟಲು ಒಡ್ಡಿದ ಕುಟಿಲ ನೀತಿಯನ್ನು ಮಾಲ್ಯವಂತನು ತನಗೆ ಅನುಕೂಲವೆಂದು ಭಾವಿಸುವಿಕೆಗಳು ನಡೆಯುತ್ತವೆ. ಪರಶುರಾಮ ಪರಾಭವ, ಸೀತಾ ಕಲ್ಯಾಣ, ಕೈಕೇಯಿಯ ವರದ್ವಯ ಯಾಚನೆ, ದಶರಥನ ಮೂರ್ಛೆ.

೫. ಜಾಂಬವಂತ ಶ್ರಮಣೆಯರ ಮಂತ್ರಾಲೋಚನೆ. ವಾಲಿವಧಾರೂಪವಾದ ಕಾರ್ಯಸಾಧನೆಗೆ ರಾಮನನ್ನು ಕಿಷ್ಕಿಂಧೆಗೆ ಕರೆಸಲು ಶ್ರಮಣೆಯನ್ನು ಮಿಥಿಲೆಗೆ ಕಳುಹಿ ಮಂಥರೆಯಲ್ಲಿ ಪ್ರವೇಶಿಸಿ ಕೈಕೇಯಿಯಿಂದ ವರದ್ವಯ ಕೇಳಿಸುವುದು ಇತ್ಯಾದಿ [ವಿಷ್ಕಂಭಕ]. ರಾಮ ಲಕ್ಷ್ಮಣರ ವನಪ್ರವೇಶ. ಸೀತಾಪಹರಣ, ಕಬಂಧನ ವಧೆ, ವಾಲಿವಧೆ.

೬. ವಿಷ್ಕಂಭಕದಲ್ಲಿ ಮಾಲ್ಯವಂತ, ಸಾರಣ ಮತ್ತು ಶುಕ ಇವರ ಮೂಲಕ ಲಂಕಾದಹನ, ವಿಭೀಷಣ ಸಖ್ಯ,

ಸೇತುಬಂಧನಾದಿಗಳ ವಿವರಣೆ. ವಿದ್ಯಾಧರರಿಂದ ರಾಮ ರಾವಣರ ಯುದ್ಧವರ್ಣನ. ರಾವಣ ಸಂಹಾರ.

೭. ವಿಮಾನದಲ್ಲಿ ರಾಮಾದಿಗಳ ಅಯೋಧ್ಯಾಗಮನ. ಮಾರ್ಗವರ್ಣನ.

## ಭವಭೂತಿಯ ಕಥಾವಿನ್ಯಾಸ ಮತ್ತು ಅದರಲ್ಲಿಯ ನ್ಯೂನತೆಗಳು

ಸಂಪೂರ್ಣ ರಾಮಾಯಣದ ಕಥೆಯನ್ನು ನಾಟಕದ ರೂಪಕ್ಕಿಳಿಸಲು ಭವಭೂತಿಯು ತುಂಬಾ ಕಷ್ಟಪಟ್ಟಂತಿದೆ. ಶ್ರವ್ಯಕಾವ್ಯವನ್ನು ದೃಶ್ಯದಲ್ಲಿ ತೋರುವುದು ದುಸ್ತರವೆಂಬುದು ಇದರಿಂದ ವೇದ್ಯವಾಗುತ್ತದೆ. ಭಾಸನು ರಾಮಾಯಣವನ್ನು ನಾಟಕ ರೂಪಕ್ಕಿಳಿಸುವಾಗ ಅದನ್ನು ವಿಭಾಗಮಾಡಿಕೊಂಡು ಅಭಿಷೇಕ, ಪ್ರತಿಮಾ ಮುಂತಾದ ಬೇರೆ ಬೇರೆ ಹೆಸರುಗಳಿಂದ ನಾಟಕವನ್ನು ಬರೆಯುವುದಕ್ಕೆ ಪ್ರಾಯಃ ಇದೇ ಕಾರಣವಿರಬಹುದು. ನಾಟಕ ಲಕ್ಷಣದಲ್ಲಿ ಹೇಳಿರುವ ಸಂಧ್ಯಂಗಗಳನ್ನು ಸಮನ್ವಯ ಮಾಡಲು ನಾಟಕವಂತೂ ವ್ಯತ್ಯಾಸವಾಗಲೇ ಬೇಕು. ಕೆಲವು ವಿಷಯಗಳನ್ನು ಸನ್ನಿವೇಶಗಳನ್ನು ಪ್ರವೇಶಕ, ವಿಷ್ಕಂಭಕಗಳಲ್ಲಿ; ಕೆಲವನ್ನು ಪಾತ್ರಗಳ ಮೂಲಕ ಹೇಳಿಸುವಾಗ ಕಥೆ ಅರೆ ಜೀವವಾಗುತ್ತದೆ. ಕೆಲವು ಸಲ ನೂತನ ಸನ್ನಿವೇಶಗಳನ್ನು ಕಲ್ಪಿಸಬೇಕಾಗುತ್ತದೆ. ಮಹಾಕವಿ ಭವಭೂತಿಯೂ ಇಲ್ಲಿ ಕೃತ

ಕೃತ್ಯನಾದಂತೆ ತೋರುವುದಿಲ್ಲ. ಅವನು ಮೊದಲಿನ ಐದು ಅಂಕಗಳನ್ನೆ ಮೊದಲು ಬರೆದು ಕೆಲವರಿಗೆ ತೋರಿಸಿದನೆಂತಲೂ ಅದಕ್ಕೆ ಜನರ ಒಪ್ಪಿಗೆ ಬರದಿರಲು ಅದನ್ನಲ್ಲಿಗೇ ಕೈಬಿಟ್ಟು ಕಲ್ಪಿತ ವಸ್ತುವಾದ 'ಮಾಲತೀ ಮಾಧವ' ದಲ್ಲಿ ಅವರ ಸೇಡು ತೀರಿಸಿಕೊಳ್ಳಲು

ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷ ಯತ್ನಃ।
ಉತ್ಪತ್ಸ್ಯತೇ ಮಮ ತು ಕೋऽಪಿ ಸಮಾನಧರ್ಮಾ
ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ॥
[೧–೮]

'ಯಾರು ನನ್ನ ಕಾವ್ಯದ ಬಗೆಗೆ ತಿರಸ್ಕಾರವನ್ನು ತೋರುವರೋ ಅವರಿಗೇನು ಗೊತ್ತು ? ಅವರಿಗಾಗಿ ನಾನು ಕೃತಿರಚನೆಗೆ ತೊಡಗಿಲ್ಲ. ನನ್ನ ಕಾವ್ಯವನ್ನು ಮೆಚ್ಚುವವನು ಮುಂದೆ ಹುಟ್ಟಿಯೇ ಹುಟ್ಟುವನು ; ಕಾಲ ನಿರವಧಿಯಾದದ್ದು, ಜಗತ್ತು ವಿಶಾಲವಾದುದು' ಎಂದಿರಬೇಕೆಂದು ಕೆಲವರು ಊಹಿಸುತ್ತಾರೆ.

## ಮುರಾರಿಯ ಕೌಶಲ್ಯ

ಇದನ್ನು ಕಣ್ಣಾರೆ ಕಂಡ ಮುರಾರಿ ಆ ಕಥೆಯನ್ನು ಸರಿಯಾದ ಮಾರ್ಗದಲ್ಲಿ ತಿರುಗಿಸಲು ಪ್ರಯತ್ನ ನಡೆಸಿದಂತೆ ಕಾಣುತ್ತದೆ. ಈತನು ಮೂಲರಾಮಾಯಣಕ್ಕೆ ಹೆಚ್ಚು ವಿರೋಧ ಬಾರದಂತೆ ಕಥೆ ಜೋಡಿಸಿದ್ದಾನೆ. ಆದರೆ ಕೇವಲ ವಿಲಕ್ಷಣ

ವಾದ ವರ್ಣನೆಗಳಲ್ಲಿಯೇ ಮಗ್ನನಾದ ಈ ಪಂಡಿತಕವಿಯೂ ನಾಟಕದ ಸ್ವರೂಪವನ್ನೇ ವಿರೂಪಗೊಳಿಸಿ ಈ ನಾಟಕವನ್ನು ಚಂಪೂಕಾವ್ಯ[ಗದ್ಯ–ಪದ್ಯಾತ್ಮಕ]ವಾಗಿ ಮಾಡಿ ತೋರಿಸಿದನು. ಈ ನಾಟಕದಲ್ಲಿ ಒಟ್ಟು ೫೬೭ ಪದ್ಯಗಳಿವೆ. ಆದರೂ ಮುರಾರಿಯು ಮಾಡಿದ ಕೆಲವು ಬದಲಾವಣೆಗಳು ಸಮಂಜಸವಾಗಿ ತೋರುತ್ತವೆ.

ಭವಭೂತಿಯು ತನ್ನ ಕೃತಿಗೆ ಸೀತಾರಾಮರ ಪ್ರೇಮವನ್ನೇ ಕಥಾಬೀಜವನ್ನಾಗಿ ಮಾಡಿಕೊಂಡಿದ್ದಾನೆ. ಅಲ್ಲಿಯ ಸನಿವೇಶಗಳಲ್ಲಿ ರಾವಣ ಮೊದಲಾದ ರಾಕ್ಷಸರ ವಿನಾಶಕ್ಕಾಗಿ ಹಾತೊರೆಯುವ ರಾಮನ ಉತ್ಸಾಹರೂಪವಾದ ಬೀಜಾರೋಪ್ಪಣೆಗೆ ಪರಿಪೋಷಣೆ ಇಲ್ಲ. ಅದಕ್ಕಾಗಿಯೇ ಆತನು ಕತೆಯನ್ನು ಮನಸ್ಸಿಗೆ ಬಂದಂತೆ ಬದಲಾಯಿಸಿದನು. ಇಲ್ಲದಿದ್ದರೆ ಮೊದಲನೆಯ ಅಂಕದ ಪ್ರಾರಂಭದಲ್ಲಿಯೇ ಸೀತಾ ಊರ್ಮಿಳೆಯರನ್ನು ಕುಶಧ್ವಜನೊಂದಿಗೆ ವಿಶ್ವಾಮಿತ್ರನ ಆಶ್ರಮಕ್ಕೆ ಕರೆತರುವ ಪ್ರಮೇಯವೇನಿತ್ತು? ಆಶ್ರಮದಲ್ಲಿಯೇ ಅವರವರ ಪರಸ್ಪರ ದರ್ಶನಗಳಿಂದ ಅವರ ಪ್ರೇಮಾಂಕುರವು ಉದಯಿಸುತ್ತದೆ. ರಾಮನ ಅಹಲ್ಯಾ ಶಾಪ ವಿಮೋಚನೆ ಮುಂತಾದವುಗಳಿಂದ ಅದು ಕ್ರಮವಾಗಿ ಬೆಳೆಯುತ್ತದೆ. ಕುಶಧ್ವಜನು ಸೀತೆಯ ವಿಷಯದಲ್ಲಿ ಹೊಣೆಗಾರಿಕೆಯನ್ನು ಜನಕರಿಂದ ಪಡೆದು ಬಂದಿರುತ್ತಾನೆ. ಆದುದರಿಂದಲೇ ರಾವಣನ ಪುರೋಹಿತನು ಸೀತೆಯನ್ನು ರಾವಣನಿಗೆ ಕೇಳಿದಾಗ ಜನಕನು ಅದಕ್ಕೆ ಉತ್ತರಿಸುವ ಹೊಣೆಯನ್ನು ವಿಶ್ವಾಮಿತ್ರ ಮತ್ತು ಕುಶಧ್ವಜರ ಮೇಲೆ ಹಾಕುತ್ತಾನೆ.

ಸರ್ವಮಾಯನು (ರಾವಣನ ವೃದ್ಧಪುರೋಹಿತ) ಆಶ್ರಮಕ್ಕೆ ಬರುವಿಕೆ, ಅವನೆದುರಿನಲ್ಲಿಯೇ ಶಿವಧನುಸ್ಸನ್ನು

ಆಶ್ರಮಕ್ಕೆ ತರಿಸುವುದು, ಧನುರ್ಭಂಗ, ರಾಮ, ಲಕ್ಷ್ಮಣ, ಭರತ ಶತ್ರುಘ್ನರಿಗೆ ಸೀತಾ, ಊರ್ಮಿಳಾದಿ ನಾಲ್ವರು ಕನ್ಯೆಯರ ನಿಶ್ಚಿತಾರ್ಥ, ತಾಟಕಾ ಮುಂತಾದವರ ವಧೆ ಇವಿಷ್ಟೂ ಮೊದಲ ನೆಯ ಅಂಕದಲ್ಲಿಯೇ ನಡೆಯುತ್ತವೆ.

ಎರಡನೆಯ ಅಂಕದಿಂದ ನಾಲ್ಕನೆಯ ಅಂಕದ ಅರ್ಧದ ವರೆಗೆ ಪರಶುರಾಮನು ಜಂಭಕೊಚ್ಚುವುದು ; ಮುಂದಿನ ಅರ್ಧ ದಲ್ಲಿ ಸೀತಾಕಲ್ಯಾಣ ಮತ್ತು ರಾಮನ ವನ ನಿರ್ಗಮನ ಇವುಗಳು ನಡೆಯುತ್ತವೆ. ಇಲ್ಲಿಂದ ಮುಂದೆ ಬರುವ ಸನ್ನಿವೇಶಗಳು ಸಾಮಾನ್ಯವಾಗಿ ಭವಭೂತಿಯ ಮತ್ತು ಮುರಾರಿಯ ಕೃತಿ ಗಳಲ್ಲಿ ಸಮವೆನ್ನಬಹುದು.

## ಮುರಾರಿಯ ಮಾರ್ಪಾಟು ಮತ್ತು ಅದರ ಔಚಿತ್ಯ

ಭವಭೂತಿಯು ಕಥೆಯನ್ನು ವ್ಯತ್ಯಾಸ ಮಾಡಿದುದಕ್ಕೆ ಆಗಿನ ಜನತೆಯಲ್ಲಿ ಮನ್ನಣೆ ದೊರೆಯದಿದ್ದುದನ್ನು ಮನಗಂಡ ಮುರಾರಿಯು ಕಥೆಯನ್ನು ವ್ಯತ್ಯಾಸಮಾಡುವ ಗೋಜಿಗೆ ಹೋಗ ಲಿಲ್ಲ. ಅಲ್ಲಿ ರಾಮಾಯಣದಲ್ಲಿರುವಂತೆ ಮೊದಲನೆಯ ಅಂಕದಲ್ಲಿ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ವನಕ್ಕೊಯ್ಯುವಿಕೆ, ಎರಡ ನೆಯ ಅಂಕದಲ್ಲಿ ತಾಟಕೆ ಮುಂತಾದವರ ವಧೆ, ಮೂರರಲ್ಲಿ ಜನಕ ಶತಾನಂದ ಮತ್ತು ವಿಶ್ವಾಮಿತ್ರರ ಸಮ್ಮುಖದಲ್ಲಿ ಶೌಷ್ಕಲನು ರಾವಣನಿಗಾಗಿ ಸೀತೆಯನ್ನು ಕೇಳಿ ಪೆಚ್ಚಾಗುವಿಕೆ, ನಾಲ್ಕರಲ್ಲಿ

ಪರಶುರಾಮುಜಯು, ಸೀತಾಕಲ್ಯಾಣ ಹೀಗೆ ಜೋಡಿಸಲಾಗಿದೆ. ಮುರಾರಿಯು ಕಥಾವಸ್ತುವಿನ ಬೀಜವನ್ನು ಆರಿಸುವುದರಲ್ಲಿಯೂ ವಿವೇಕವನ್ನು ಉಪಯೋಗಿಸಿದ್ದಾನೆ. ಭವಭೂತಿಯು ವೀರರಸ ಪ್ರಧಾನವಾದ ತನ್ನ ಕೃತಿಗೆ ಸೀತಾರಾಮರ ಪ್ರೇಮವನ್ನೇ ಕಥಾಬೀಜವನ್ನಾಗಿ ಆರಿಸಿಕೊಂಡು ಅದಕ್ಕೆ ಅನುಗುಣವಾಗಿ ಕಥೆಯಲ್ಲಿ ವ್ಯತ್ಯಾಸಗಳನ್ನು ಮಾಡಿರುವುದು ಮುರಾರಿಗೆ ಒಪ್ಪಿತವಾಗಲಿಲ್ಲ. ಅವನು ರಾಮ ಜನನವು ರಾವಣಾದಿಗಳ ವಿನಾಶಕ್ಕಾಗಿ ಎಂಬುದನ್ನು ಮನಗಂಡು ಅದಕ್ಕೆ ರಾಮ ಜನನ ವನ್ನು ಸಜ್ಜುಗೊಳಿಸುವುದಕ್ಕೆ ಅನುಕೂಲವಾದ ಸನ್ನಿವೇಶ ಗಳನ್ನು ಕಲ್ಪಿಸಿದ್ದಾನೆ.

ಮೊದಲನೆಯ ಅಂಕದಲ್ಲಿಯೇ ವಿಶ್ವಾಮಿತ್ರನು ಹೇಳುವ "ದಶಕಂಧರ ಪ್ರಭೃತಯೋ ನಿಗ್ರಾಹಿತಾರಸ್ತ್ವಯಾ, ಎಂಬುದು ಇದನ್ನು ಸಮರ್ಥಿಸುತ್ತದೆ. ಹಾಗಿಲ್ಲದಿದ್ದರೆ "ತಪೋ ಲೇಶ ಕ್ಲೇಶಾದುಪಶಮಿತ ವಿಘ್ನಪ್ರತಿಭಯೇ" ಎನ್ನುವಂತೆ "ತಪಸ್ಸಿನ ಲೇಶಾಂಶದಿಂದಲೇ ವಿಘ್ನಗಳನ್ನು ಧ್ವಂಸಮಾಡಬಲ್ಲ" ವಿಶ್ವಾ ಮಿತ್ರನು ರಾಮಲಕ್ಷ್ಮಣರನ್ನು ಯಜ್ಞ ರಕ್ಷಣೆಗಾಗಿ ಕರೆಯಿಸಿ ಕೊಳ್ಳುವ ಪ್ರಮೇಯವೇನಿತ್ತು ? ವಿಶ್ವಾಮಿತ್ರನ ಕಾರ್ಯವು 'ಅತಿಥಿಯ ಕೈಯಿಂದ ಹಾವು ಕೊಲ್ಲಿಸುವಂತಿದೆ' ಎಂದು ಆಶ್ರಮ ಶಿಷ್ಯ ಪಶುಮೇಢ್ರನು ಹಾಸ್ಯಮಾಡುತ್ತಾನೆ. ಆದರೆ ಇಲ್ಲಿ ಯಜ್ಞ ದೀಕ್ಷೆ ತೆಗೆದುಕೊಂಡನಂತರ ಕೋಪಮಾಡಲು ಅಗುವುದಿಲ್ಲವೆಂದು ಕ್ಷತ್ರಿಯರನ್ನು ತಮ್ಮ ರಕ್ಷಣೆಗೆ ಕರೆಯುತ್ತಾರೆ ಎಂಬ ಮಾತು ವಿಶ್ವಾಮಿತ್ರನ ವಿಷಯದಲ್ಲಿ ಒಪ್ಪತಕ್ಕುದಲ್ಲವೆಂದು ಜನಕನೂ, ಯಜ್ಞೋಪಶಾಂತಿಗಾಗಿ ಮಗನನ್ನು ಬೇಡುವುದು.... .... ....

ಮುಂತಾದುದು ಅರ್ಥವಾಗದ ಸಮಸ್ಯೆ. "ನೋ ವಿದ್ಮಃ ಕುಹನಾವಿಟೇನ ಬಟುನಾ ಕಿಂತೇನಕಾರಿಷ್ಯತೇ" 'ಕಪಟ ವಿದ್ಯೆಯಲ್ಲಿ ನಿಪುಣನಾದ ವಟುವು (ವಿಶ್ವಾಮಿತ್ರ) ಏನೇನನ್ನು ಮಾಡಿಸುವನೆಂಬುದೇ ಅರ್ಥವಾಗುವುದಿಲ್ಲ ಎಂದು ಮಾಲ್ಯವಂತನೂ ವಿಶ್ವಾಮಿತ್ರನ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸುವುದು ಇದನ್ನು ದೃಢಪಡಿಸುತ್ತದೆ.

ಎರಡನೆಯದಾಗಿ ಕಥಾಸಂವಿಧಾನವನ್ನು ಜೋಡಿಸಲು ಭವಭೂತಿಯು ಕೌಟಿಲ್ಯನೀತಿಯನ್ನು ಬಳಸಿಕೊಂಡಿದ್ದಾನೆ. ಅಲ್ಲಿ ಮಾಲ್ಯವಂತನು ಕೂಟನೀತಿಯನ್ನು ಅವಲಂಭಿಸಿದರೂ ಕೃತಕೃತ್ಯನಾಗಲಿಲ್ಲ. ಭವಭೂತಿಯ ಮಾಲ್ಯವಂತನು ಉದ್ದೇಶಪೂರ್ವಕವಾಗಿ ಸೀತಾಪಹರಣ ಮಾಡಲು ಶೂರ್ಪಣಖಿಯ ಮೂಲಕ ವಂಚನೆ ಮಾಡಿಸುತ್ತಾನೆ.

ಆದರೆ ಮುರಾರಿಯು ನಾಲ್ಕನೆಯ ಅಂಕದ ವಿಷ್ಕಂಭಕದಲ್ಲಿ ಗರ್ಭಸಂಧಿಯನ್ನು ತಂದು ಕೌಟಿಲ್ಯನೀತಿಯನ್ನು ಮನೋಜ್ಞವಾಗಿ ಜೋಡಿಸಿ ಸನ್ನಿವೇಶಗಳನ್ನು ಬೆರ್ಪಡಿಸಿದ್ದಾನೆ. ಮುದ್ರಾರಾಕ್ಷಸ ನಾಟಕದಲ್ಲಿ 'ಚಾಣಕ್ಯ' ಮತ್ತು 'ಅಮಾತ್ಯರಾಕ್ಷಸ' ರ ನೀತಿಯ ಪ್ರಯೋಗಗಳಿಗೆ ಹೋರಾಟ ನಡೆದಂತೆ ಮುರಾರಿಯ ಕೃತಿಯಲ್ಲಿ ಜಾಂಬವ ಮತ್ತು ಮಾಲ್ಯವಂತರ ಎರಡು ನೀತಿ ಪ್ರಯೋಗಗಳಿಗೆ ಹೋರಾಟ ನಡೆಯುತ್ತದೆ. ಇವರಿಬ್ಬರೂ ನೀತಿಶಾಸ್ತ್ರ ಕೋವಿದರು. ಇವರು ಗೂಢಚಾರರ ಮೂಲಕ ಪರಸ್ಪರರ ಪ್ರಯೋಗಗಳನ್ನೂ ತಿಳಿಯುತ್ತಾರೆ. ಆದರೆ ಇಲ್ಲಿ ಜಾಂಬವ ಮತ್ತು ಶ್ರಮಣೆಯರ ಕಾರ್ಯಕೌಶಲ ಮಾಲ್ಯವಂತನ

ನೀತಿಯನ್ನು ಉರುಳಿಸುತ್ತದೆ. ಜಾಂಬವಂತನ ನೀತಿಯಲ್ಲಿ ಧರ್ಮದ್ರೋಹವಿಲ್ಲ, ದುರುದ್ದೇಶವಿಲ್ಲ. ದುಷ್ಟನೂ, ಪ್ರಜಾದ್ರೋಹಿಯೂ ಆದ ವಾಲಿಯನ್ನು ನಿಗ್ರಹಿಸಿ ಪ್ರಜಾಹಿತೈಷಿಯಾದ ಸುಗ್ರೀವನನ್ನು ನೆಟ್ಟಗೆ ನಿಲ್ಲಿಸಲು ಅವನು ಪ್ರವೃತ್ತನಾದದ್ದು. ಅದಕ್ಕಾಗಿಯೇ ಅವನು ಶ್ರಮಣೆಯ ಮೂಲಕ ಕಪಟನೀತಿಯನ್ನು ಪ್ರಯೋಗಿಸಿ ರಾಮನನ್ನು ಕಾಡಿಗೆಳೆದುದು. ಕಾಡಿನಲ್ಲಿ ನಡೆದ ಸೀತಾಪಹರಣವು ವಿಧಿವಶದಿಂದ ಆದುದು. ಅದು ಜಾಂಬವನ ಕೈಮೀರಿದ್ದು. ಆದರೆ ಮಾಲ್ಯವಂತನು ಅರ್ಥಶಾಸ್ತ್ರಪಂಡಿತನಾದರೂ ಅವನ ನೀತಿಯ ಹಿನ್ನೆಲೆ ದುರುದ್ದೇಶ. ಅವನ ನೀತಿಯು ಮುದ್ರಾರಾಕ್ಷಸದ 'ಅಮಾತ್ಯರಾಕ್ಷಸ'ನ ನೀತಿಯಂತೆ ಕುಂಠಿತವಾಗಿ ಕಡೆಗೆ ಅದರಿಂದ ಸ್ವಪಕ್ಷನಾಶವೇ ಸಂಭವಿಸಿತು. ಮಂಥರೆಯ ವೇಷದಲ್ಲಿ ನಡೆಯಿಸಿದ ಈ ವಂಚನೆಯಿಂದ ಕೈಕೇಯಿಯು ನಿರಪರಾಧಿನಿಯೆಂದು ಸಿದ್ಧವಾದರೂ ಮುರಾರಿಯ ಸನ್ನಿವೇಶವು ಉಚಿತವೆನಿಸುತ್ತದೆ.

ಕೆಲವರು 'ಅನರ್ಘ ರಾಘವ'ವು ಭವಭೂತಿಯ 'ಮಹಾವೀರಚರಿತ್ರೆ' ಯಂತೆಯೇ ಇರಬಹುದೆಂದು ಊಹಿಸಿ 'ಇಲ್ಲಿಯೂ ಮಾಲ್ಯವಂತನು ಅರ್ಥಶಾಸ್ತ್ರಪಂಡಿತ (ಸಂಸ್ಕೃತ ನಾಟಕ ಪುಟ. ೨೪೩) ಇತ್ಯಾದಿ' ಹೇಳುತ್ತಾರೆ, ಮಾಲ್ಯವಂತನು ಅರ್ಥಶಾಸ್ತ್ರಪಂಡಿತನಾದರೂ ಅವನಿಗೆ ಅದನ್ನು ಪ್ರಯೋಗಿಸುವ ಜಾಣ್ಮೆಯಿಲ್ಲ. ಇಲ್ಲಿ ಮಂಥರೆಯನ್ನು ಪ್ರವೇಶಿಸಿದವಳು ಶೂರ್ಪಣಖಿಯಲ್ಲ, ಶ್ರಮಣೆ. ರಾಮನು ಶ್ರಮಣೆಯ ತಂತ್ರದಿಂದ ಕಾಡಿಗೆ ಬಂದುದು ಸೀತಾಪಹರಣಕ್ಕೆ ಅನುಕೂಲವಾಯಿತೆಂದು ಮಾಲ್ಯವಂತನು ಹೇಳುತ್ತಾನೆ. 'ಅತಿಥಿಯೇ

ಪುತ್ರದಾರಾದಿಗಳನ್ನು ಅಪಹರಿಸುವುದರಿಂದ ಪ್ರಜೆಗಳು ಕುಪಿತ ರಾಗಿ ಮಂಡಲವು ನಾಶವಾಗುವು'ದೆಂದು ತಿಳಿದಿದ್ದರೂ ಅವನು ಉನ್ಮಾರ್ಗದಲ್ಲಿ ಪ್ರವರ್ತಿಸುತ್ತಾನೆ. ಇದರಿಂದ ಅವನ ನೀತಿಯು ಫಲಮುಖವಾಗುವುದಿಲ್ಲ.

ಹೀಗೆಯೇ ವಿಭೀಷಣನು ರಾಮನಲ್ಲಿಗೆ ಬರುವ ವಿಷಯ ದಲ್ಲಿಯೂ ಭವಭೂತಿಯು ರಾಮನೊಡನೆ ಸುಗ್ರೀವನ ಭೇಟಿ ಯಾಗುವುದಕ್ಕೆ ಮುಂಚೆಯೇ ವಿಭೀಷಣನನ್ನು ಕರೆತಂದಿದ್ದಾನೆ. ರಾಮಾಯಣದಲ್ಲಿರುವ ಸುಗ್ರೀವ ಸಖ್ಯ ಲಂಕಾದಹನಾದಿಗಳು ನಡೆದಮೇಲೆ ಆಗಬೇಕಾದ ವಿಭೀಷಣನ ಶರಣಾಗತಿಯನ್ನು ಬದಲಾಯಿಸುವುದಕ್ಕೆ ಬಲವಾದ ಕಾರಣಗಳೇನೂ ಇರುವುದಿಲ್ಲ. ಭವಭೂತಿಯು ವಾಲಿ ವಧೆಯ ವಿಷಯದಲ್ಲಿನ ಸನ್ನಿವೇಶ ನಿರ್ಮಾ ಣಕ್ಕಾಗಿ ಬಹಳ ಪೇಚಾಡಿದಂತೆ ಕಾಣುತ್ತದೆ. ಇದೆಲ್ಲವನ್ನೂ ಮುರಾರಿಯು ಒಂದು ದೃಷ್ಟಿಯಿಂದ ಸರಿಪಡಿಸಿ ಕಥೆಯನ್ನು ಕಟ್ಟಿರುವುದು ಸಮಂಜಸವೆನಿಸುತ್ತದೆ. ಇದರಿಂದ'ಭವಭೂತಿಯು ಕವಿಯೇ ಹೊರತು ನಾಟಕಕಾರನಲ್ಲ' (ಕಾಳಿದಾಸ್ ಔರ್ ಭವಭೂತಿ)ನೆಂದು ಹೇಳಿರುವ ಮಾತು ಯಥಾರ್ಥವೆನಿಸುತ್ತದೆ.

## ಪಾತ್ರಚಿತ್ರಣದಲ್ಲಿ ಮುರಾರಿಯ ಅನಾದರ

ಮುರಾರಿಯು ಕೇವಲ ವರ್ಣನೆಗಳಲ್ಲಿಯ ವಕ್ರವಿನ್ಯಾಸಕ್ಕೇ ವಿಶೇಷ ಬುದ್ಧಿಶಕ್ತಿಯನ್ನು ವಿನಿಯೋಗಿಸಿರುವುದರಿಂದ ಅವನು ಪಾತ್ರಪರಿಪೋಷಣೆಗೆ ಹೆಚ್ಚು ಗಮನಕೊಟ್ಟಂತೆ ತೋರುವುದಿಲ್ಲ.

ಯಾವುದಾದರೂ ಪಾತ್ರ ಪ್ರವೇಶಿಸಿದೊಡನೆಯೇ ಅದರ ವಿಷಯದಲ್ಲಿ ಬರುವ ಹಳೆಯ ಕಥೆಗಳೆಲ್ಲವನ್ನೂ ವರ್ಣಿಸುವುದಕ್ಕೆ ಆರಂಭಿಸಿಬಿಡುತ್ತಾನೆ. ಇದರಿಂದ ನಾಟಕದಲ್ಲಿನ ಪಾತ್ರಪುಷ್ಟಿಗಿಂತಲೂ ಕವಿಯ ಪಾಂಡಿತ್ಯಪುಷ್ಟಿಯೇ ಎಲ್ಲೆಡೆಯೂ ಎದ್ದು ಕಾಣುತ್ತದೆ.

## ಸನ್ನಿವೇಶಕಲ್ಪನೆಯಲ್ಲಿ ಕವಿಯ ಕೌಶಲ

ಮುರಾರಿಯು ಪಾತ್ರಗಳ ವಿಷಯಗಳಲ್ಲಿರುವ ಐತಿಹ್ಯಗಳನ್ನು ಹೊಂದಿಸಿಕೊಂಡು ಸನ್ನಿವೇಶ ಸೃಷ್ಟಿಸುವುದರಲ್ಲಿ ತನ್ನ ಕೌಶಲವನ್ನು ವಿನಿಯೋಗಿಸಿದ್ದಾನೆ. ಉದಾಹರಣೆಗಾಗಿ :

೧ ಗುಹನು ರಾಮುನನ್ನು ನದಿ ದಾಟಿಸಿದನು. ರಾಮನು ಅವನಿಗೆ " ಸೌಮಿತ್ರಿಮೈತ್ರಿ " (ತಮ್ಮನಾದ ಲಕ್ಷ್ಮಣನಲ್ಲಿರುವ ಪ್ರೇಮಕ್ಕೆ ಸಮನಾದ ಪ್ರೇಮ ಅಥವಾ ವಾತ್ಸಲ್ಯ)ಯನ್ನೇ ಪಣ್ಯದ್ರವ್ಯವನ್ನಾಗಿ ಕೊಟ್ಟನು. ಶ್ರಮಣೆಗೂ ಗುಹನಿಗೂ ಬಾಂಧವ್ಯ. ಆದುದರಿಂದ ಶ್ರಮಣೆಯು ಗುಹನ ಮೂಲಕ ಲಕ್ಷ್ಮಣನಿಗೆ ಹೇಳಿ ರಾಮನ ಸ್ನೇಹವನ್ನು ಸುಗ್ರೀವನಿಗೆ ಮಾಡಿಸುವುದಾಗಿ ಹೇಳುವಳು.

೨ ಯಾಜ್ಞ್ಯವಲ್ಕ್ಯನೂ ಹನುಮಂತನೂ ಸೂರ್ಯನಲ್ಲಿ ವಿದ್ಯಾಭ್ಯಾಸ ಮಾಡಿದರೆಂದು ಪ್ರತೀತಿಯಿದೆ. ಆದ್ದರಿಂದ ಇಬ್ಬರೂ ಸಹಾಧ್ಯಾಯಿಗಳು. ಹನುಮಂತನು ಸತೀರ್ಥ್ಯ(Class Mate)ನಾ ಯಾಜ್ಞ್ಯವಲ್ಕ್ಯನಲ್ಲಿಗೆ ನಿತ್ಯವೂ ಹೋಗಿ ಬರು

ತ್ತಿದ್ದುದರಿಂದ ಅವನ ಮೂಲಕ ಮಿಥಿಲಾನಗರದ ಹತ್ತಿರ ಮಂಥರೆಯು ಬಂದು ಬಿದ್ದಿರುವುದನ್ನು ತಿಳಿದು ಜಾಂಬವಂತನು ಶ್ರಮಣೆಯನ್ನು ಕಾರ್ಯಸಾಧನೆಗಾಗಿ ಹನುಮಂತನೊಂದಿಗೆ ಕಳುಹಿಸುತ್ತಾನೆ.

೩ ವೈಶೇಷಿಕ ದರ್ಶನಕ್ಕೆ 'ಕಟಂದೀ' ಎಂಬ ವ್ಯಾಖ್ಯಾನವನ್ನೂ 'ಕಂದಲೀ' ಎಂಬ ಟೀಕೆಯನ್ನೂ ರಾವಣನು ರಚಿಸಿದನೆಂದು ಪ್ರತೀತಿ ಇದೆ.ಇದನ್ನು ಮುರಾರಿಯು, ರಾವಣನು ಸೀತಾಪಹರಣಕ್ಕಾಗಿ ಬಂದಾಗ 'ಕಟಂದೀ' ಪಂಡಿತನ ವೇಷ ದಿಂದ ಅಲ್ಲಿಗೆ ಬಂದು 'ಉಕ್ತಿಪ್ರತ್ಯುಕ್ತಿ' ರೂಪವಾದ 'ವಾಕ್ ಛಲ'(ವಾಕ್ಯಾರ್ಥದಲ್ಲಿ, ಹೇಳಿರುವ ೧೯ ನಿಗ್ರಹಸ್ಥಾನಗಳಲ್ಲಿ ಒಂದು)ದಿಂದ ಲಕ್ಷ್ಮಣನನ್ನು ವಂಚಿಸಿದಂತೆ ಹೇಳುತ್ತಾನೆ.

೪ ಖರದೂಷಣರು ರಾಮನನ್ನು ಕೆಣಕಿದುದಕ್ಕೆ ತೋರಿಸಿ ರುವ ಕಾರಣವು ಮುರಾರಿಯ ಶಾಸ್ತ್ರಾಭಿಮಾನಕ್ಕೆ ಕುರುಹಾಗಿದೆ. ಕ್ಷತ್ರಿಯರಿಗೆ 'ಶಾವಾಶೌಚ'(ಮರಣಸೂತಕ)ವಿರುವಾಗ ಶಸ್ತ್ರಗ್ರಹಣವು ನಿಷೇಧಿಸಲ್ಪಟ್ಟಿದೆ. ಇದನ್ನರಿತು ಖರದೂಷಣರು "ತಂದೆಯ ಮರಣಸೂತಕದಿಂದ ರಾಮನು ಶಸ್ತ್ರಗ್ರಹಣ ಮಾಡುವುದಿಲ್ಲ" ಎಂದು ಭಾವಿಸಿ ಅವನನ್ನು ಕೆಣಕಿದರಂತೆ. ಆದರೆ ಆ ಖರ ದೂಷಣರಿಗೆ ಅದೇ ಧರ್ಮಶಾಸ್ತ್ರದಲ್ಲಿ ಮುಂದೆ ಹೇಳಿರುವ 'ನ ರಾಜ್ಞಾಂ ರಾಜಕರ್ಮಣಿ' "ಈ ನಿಯಮವು ರಾಜರಿಗೆ ರಾಜ್ಯಾಡಳಿತದಲ್ಲಿ ಅನ್ವಯಿಸುವುದಿಲ್ಲ" ಎಂಬ ಅಪವಾದ ಸೂತ್ರವು ತಿಳಿದಿರಲಿಲ್ಲ.

## ಮುರಾರಿಯ ಅಪೂರ್ವ ವರ್ಣನೆಗಳು

ಮುರಾರೇಃ ತೃತೀಯಃ ಪಂಥಾಃ (ಮೂರನೆಯ ದಾರಿ) ಎಂಬ ಪ್ರಶಸ್ತಿಗೆ ಕವಿಗಿರುವ ವಿಲಕ್ಷಣ ಶಾಸ್ತ್ರವಾಸನೆಯೇ ಕಾರಣ ಎಂದು ಹಿಂದೆಯೇ ಹೇಳಿದೆ. ವಾಚಕರ ಅವಗಾಹನೆಗಾಗಿ ಕೆಲವು ನಿದರ್ಶನಗಳನ್ನು ಇಲ್ಲಿ ಕೊಟ್ಟಿದೆ.

೧ **ಇಂದ್ರ**— ದಶರಥನು ತನ್ನ ಅಸಾಧಾರಣವಾದ ಶೌರ್ಯದಿಂದ ಮೂರು ಲೋಕಗಳಿಗೂ ಅಭಯಪ್ರಧಾನ ಮಾಡಿದ್ದುದರಿಂದ ಮೈಗಣ್ಣನಾದ ಇಂದ್ರನಿಗೆ ಕೆಲಸವು ಕಡಮೆಯಾಯಿತು. ಪ್ರತಿದಿನವೂ ಯಜ್ಞಗಳಲ್ಲಿ ಹವಿರ್ಭಾಗವನ್ನು ತಿಂದು ಸುಮ್ಮನೆ ಕೂಡುತ್ತಿದ್ದುದರಿಂದ ಅವನಿಗೆ ಮೈ ಬೊಜ್ಜು ಬೆಳೆದು ಮೈಯಲ್ಲಿನ ಕಣ್ಣುಗಳ ಮೇಲೆ ಚರ್ಮ ಮುಚ್ಚಿಕೊಂಡಿತು. ಇದರಿಂದ ಇಂದ್ರನ ಮೈಯು ಕಲೆಗಳಿಲ್ಲದೆ ಸರಿಯಾಗಿಯೇ ಕಾಣುತ್ತಿತ್ತು.

> ತ್ರೈಲೋಕ್ಯಾಭಯಲಗ್ನಕೇನ ಭವತಾ ವೀರೇಣ ವಿಸ್ಮಾರಿತ-
> ಸ್ತ್ವಜ್ಜೀಮೂತಮುಹೂರ್ತಖಂಡನಥನುಃ
> ಪಾಂಡಿತ್ಯಮಾಖಂಡಲಃ ।
> ಕಿಂ ಚಾಜಸ್ರಮುಖಾರ್ಪಿತೇನ ಹವಿಷಾ ಸಂಫುಲ್ಲಮಾಂಸೋಲ್ಲಸ
> ತ್ಸರ್ವಾಂಗೀಣ ವಲೀವಿಲುಪ್ತನಯನ ವ್ಯೂಢಃ ಕಥಂ ವರ್ತತೇ॥
> (೧-೨೮)

೨ **ಇಂದ್ರನ ಅಸೂಯೆ**: ಎಷ್ಟು ಉಪಕಾರ ಮಾಡಿದರೂ ಇಂದ್ರನು ತನಗಿಂತಲೂ ಬಲಿಷ್ಠರಾದವರ ವಿಷಯ

ದಲ್ಲಿನ ಪ್ರಶಂಸೆಯನ್ನು ಕೇಳಿ ಸಹಿಸುತ್ತಿರಲಿಲ್ಲ. 'ಮಹಾವೀರನಾದ ದಶರಥನನ್ನು ಇಂದ್ರನು ಆಗಾಗ ದೇವಲೋಕಕ್ಕೆ ತನ್ನ ಸಹಾಯಕ್ಕಾಗಿ ಕರೆಯಿಸಿಕೊಂಡು ಗೌರವಾರ್ಥಕ್ಕಾಗಿ ಅವನನ್ನು ತನ್ನ ಅರ್ಧಾಸನದಲ್ಲಿ ಕೂಡಿಸಿಕೊಳ್ಳುತ್ತಿದ್ದನು. ಕಿನ್ನರರು ದಶರಥನ ಶೌರ್ಯವನ್ನು ಹಾಡಿದಾಗ ದಶರಥನಿಗೆ ವೈರೋಮಾಂಚವಾಗುತ್ತಿತ್ತು. ಇಂದ್ರನಿಗೆ ಇದರಿಂದ ವ್ಯಸನವಾಗಿ ಕಣ್ಣೀರು ಬರುತ್ತಿತ್ತು. ಆದರೂ ಇಂದ್ರನು ಇದನ್ನು ತೋರ್ಪಡಿಸದೆ, ದಶರಥನ ವೈನಿಲುವು ಕೂದಲು ತನ್ನವೈಗಣ್ಣುಗಳಿಗೆ ಚುಚ್ಚಿದ್ದರಿಂದ ಕಣ್ಣೀರು ಬಂದಿತೆಂಬಂತೆ ನಟಿಸುತ್ತಿದ್ದನು.

ತ್ವಯ್ಯರ್ಧಾಸನಭಾಜಿ ಕಿನ್ನರಗಣೋದ್ಗೀತೈರ್ಭವದ್ವಿಕ್ರಮೈ-
ರಂತಸ್ಸಂಭೃತ ಮತ್ಸರೋಽಪಿ ಭಗವಾನಾಕಾರಗುಪ್ತೌ ಕೃತೀ ।
ಉನ್ಮೀಲದ್ಭವದೀಯ ದಕ್ಷಿಣ ಭುಜಾರೋಮಾಂಚ ವಿದ್ಧೋಚ್ಚರ-
ದ್ಬಾಷ್ಪೈರೇವ ವಿಲೋಚನೈರಭಿನಯತ್ಯಾನಂದಮಾಖಂಡಲಃ ॥
(೩–೩೮)

೩ ಇಂದ್ರನು ರಾವಣನಿಗೆ ಸೋತು ಓಡುವಾಗಲೂ ಹಿಂಗಡೆಯ ಕಣ್ಣುಗಳಿಂದ ಅವನು ಶತ್ರುವನ್ನು ನೋಡುತ್ತಿದ್ದನು.

ಯಚ್ಚೇಷ್ಟಾಃ ಸಮನೀಕಸೀಮನಿ ಪರಿತ್ರಸ್ತಃ ಪರಾಂಚನ್ನಪಿ ।
ಪ್ರತ್ಯಕ್ಷೀಕುರುತೇ ಸಹಸ್ರನಯನಃ ಪೃಷ್ಠೋದ್ಯವೈರಕ್ಷಿಭಿಃ ॥
(೩–೩೮)

೪ **ವಿಷ್ಣುವಿನ ಶೇಷಶಯನ:** ದಶರಥನ ರಾಜ್ಯಕಾಲದಲ್ಲಿ ಮೂರು ಲೋಕಗಳಿಗೂ ಸಮೃದ್ಧಿ ಇತ್ತು. ವಾತಾವರಣವು ಶಾಂತವಾಗಿ ತಂಪಾಗಿ ಸುಮಸೌರಭದಿಂದ ತುಂಬಿತ್ತು.

ಗಾಳಿಯನ್ನೇ ಸೇವಿಸುವ ಆದಿಶೇಷನು ಇಂಥ ರುಚಿಯಾದ ಗಾಳಿಯನ್ನು ಯಥೇಚ್ಛವಾಗಿ ಕುಡಿದುದರಿಂದ ಅವನ ಮೈಯುಬ್ಬಿದಪ್ಪನಾದ ತಡಿ(ಹಾಸಿಗೆ)ಯಂತಾಯಿತು. ವಿಷ್ಣುವು ಇಂತಹ ಸುಖವಾದ ಶೇಷಶಯನದ ಮೇಲೆ ಮಲಗಿ ಆನಂದದಿಂದ ನಿದ್ರಿಸುತ್ತಿದ್ದನು.

ದತ್ತೇಂದ್ರಾಭಯವಿಭ್ರಮಾದ್ಭುತಭುಜಾಸಂಭಾರಗಂಭೀರಯಾ
ತ್ವದ್ವೃತ್ತ್ಯಾ ಶಿಥಿಲೀಕೃತಸ್ತ್ರಿಭುವನತ್ರಾಣಾಯ ನಾರಾಯಣಃ।
ಅಂತಸ್ಸ್ವೇದತುಷಾರ ಸೌರಭಮಯಶ್ವಾಸಾನಿಲಾಪೂರಣ-
ಪ್ರಾಣೋತ್ತುಂಗಭುಜಂಗತಲ್ಪಮಧುನಾ ಭದ್ರೇಣ ನಿದ್ರಾಯತೇ॥
(೧-೨೭)

೫ ವಿಶ್ವಾಮಿತ್ರನು, ಮೊದಲು ಕ್ಷತ್ರಿಯನಾಗಿದ್ದು ತರುವಾಯ ಬ್ರಹ್ಮಋಷಿಯಾದುದನ್ನು ಹೀಗೆ ಹೇಳಲಾಗಿದೆ.

‘ ವಿಶ್ವಾಮಿತ್ರನು, ತನ್ನ ಕ್ಷತ್ರಿಯ ದೇಹವನ್ನು ತಪಸ್ಸೆಂಬ ಕಲ್ಲು ಸೀಳುವ ಉಳಿಗಳಿಂದ ಕೆತ್ತಿ ಬ್ರಹ್ಮಶರೀರವನ್ನಾಗಿ ಕಡೆದನು ’.

ಯಃ ಕ್ಷತ್ರದೇಹಂ ಪರಿತಕ್ಷ್ಯ ಟಂಕೈ
ಸ್ತಪೋಮಯೈ್ಯ ಬಾಹ್ಮಣಮುಚ್ಚಕಾರ
ಪರೋರಜೋಭಿಃ ಸ್ವಗುಣೈರಗಾಧಃ
ಸಗಾಧಿ ಪುತ್ರೋಽಪಿ ಗೃಹಾನುಪೈತಿ॥
(೧-೨೨)

೬ **ರಾವಣ** : ರಾವಣನು ತನ್ನ ಇಪ್ಪತ್ತು ಕೈಗಳೆಂಬ ವನದಲ್ಲಿಯೇ ಲಕ್ಷ್ಮಿಗಿದ್ದ ‘ ನಾನಾ ಸ್ಥಾನಭ್ರಮಣ ’

(ಚಾಂಚಲ್ಯ)ವೆಂಬ ಚಾಪಲ್ಯವನ್ನು ತೀರಿಸುತ್ತಿದ್ದನು. ಅಂದರೆ ಲಕ್ಷ್ಮಿ ಚಂಚಲೆಯಾದರೂ ಅವಳು ರಾವಣನ ಭುಜವನದಲ್ಲಿಯೇ ಒಂದಿಲ್ಲೊಂದು ಭುಜವನ್ನು ಆಶ್ರಯಿಸಿ ತೃಪ್ತಳಾಗುತ್ತಿದ್ದಳು.

ಶ್ರಿಯೋಃ ನಾನಾಸ್ಥಾನ ಭ್ರಮಣರಮಣೀಯಾಂ ಚಪಲತಾ-
ಮವಚ್ಛಿದ್ಯಸ್ವಸ್ಮಿನ್ನಪಿ ಭುಜವನೇ ಪೂರಯತಿ ಯಃ ||
(೩-೪೦)

ರಾವಣನು ತನ್ನ ಇಪ್ಪತ್ತುಕೈಗಳ(೨೦ × ೫=೧೦೦) ನೂರು ಬೆರಳುಗಳಿಂದಲೇ ಕೈಲಾಸಪರ್ವತವನ್ನೆತ್ತಿದನು.

ತೇನಾಂಗುಲೀಶತನಿಘೃಷ್ಟಕಙಭೇರಶೈಲ-
ಕಂಠೋಕ್ತದೋಃ ಕುಲಿಶಕಂದಲವಿಕ್ರಮೇಣ ||

೮ **ರಾವಣನ ಅಭಿಮಾನ:** ಅವನು ಶಿವನನ್ನು ಕುರಿತು ತಪಸ್ಸುಮಾಡಿ ಶಿವನನ್ನು ಸಂತೋಷಪಡಿಸಲು ತನ್ನ ತಲೆಗಳನ್ನೇ ಕತ್ತರಿಸಿಕೊಡುತ್ತಿದ್ದನು. ರಾವಣನ ವೀರಭಕ್ತಿಗೆ ಮೆಚ್ಚಿ ಶಿವನು ವೈದೋರಿ ಬೇಕಾದ ವರಗಳನ್ನು ಬೇಡು ಎಂದನು. ಆಗ ರಾವಣನ ತಲೆಗಳು 'ಬೇಡುವುದು ಹೀನಾಯ'ವೆಂದು ಬಗೆದು 'ನೀನು ಬೇಡು, ನೀನು ಬೇಡು' ಎಂದು ತಮ್ಮ ತಮ್ಮಲ್ಲಿಯೇ ಜಗಳವಾಡುತ್ತಿದ್ದವು.

ಸಂತುಷ್ಟೇ ತಿಸೃಣಾಂ ಪುರಾಮಪಿ ರಿಪೌ ಕಂಡೂಲ
ದೋರ್ಮಂಡಲೀ
ಕ್ರೀಡಾಕೃತ್ತ ಪುನಃಪ್ರರೂಢಶಿರಸೋ
ವೀರಸ್ಯ ಲಿಪ್ಸೋರ್ವರಮ್

ಯಾಂಚ್ನಾದ್ಯೈನ್ಯ ಪರಾಂಚಿ ಯಸ್ಯ ಕಲಹಾಯಂತೇ
ಮಿಥಸ್ತ್ರ್ಯ ವೃಣ
ತ್ವಂ ವೃಣ್ವಿತ್ಯಭಿತೋ ಮುಖಾನಿ ಸ ದಶಗ್ರೀವಃ ಕಥಂ ವರ್ಣ್ಯತಾಮ್
(೩-೪೧)

೯ ರಾಮನು ಸುವೇಲಾಚಲಕ್ಕೆ ಮುತ್ತಿಗೆ ಹಾಕಿದಾಗ ರಾವಣನಿಗೆ ಒಂದೇ ಕಾಲದಲ್ಲಿ ಎರಡು ಕೆಲಸಗಳು ಬಿದ್ದವು. ರಾಮನ ಸಂಹಾರಕ್ಕಾಗಿ ಆಯುಧಗಳನ್ನು ಸಜ್ಜುಗೊಳಿಸುವುದು ಒಂದು. ರಾಮನನ್ನು ಗೆದ್ದಮೇಲೆ ಮಾಡಬೇಕಾದುದು ಮತ್ತೊಂದು. ಆದ್ದರಿಂದ ರಾವಣನ ಹತ್ತು ಕೈಗಳು ಒಳ್ಳೆಯ ಆಟಾಟೋಪದಿಂದ ಖಡ್ಗಗಳನ್ನು ಮಸೆಯುತ್ತಿದ್ದವು. ಉಳಿದ ಹತ್ತು ಕೈಗಳು ಸೀತೆಯ ಕುಚಗಳ ಮೇಲೆ ಬರೆಯಲಿರುವ ಚಿತ್ರಗಳನ್ನು ಚಿತ್ರದ ಹಲಗೆಯ ಮೇಲೆ ಅಭ್ಯಾಸ ಮಾಡುತ್ತಿದ್ದವು.

ಶ್ರುತ್ವಾ ದಾಶರಥೀ ಸುವೇಲಕಟಕೇ ಸಾಟೋಪಮರ್ಧೇ ಧನ
ಷ್ಟಂಕಾರೈಃ ಪರಿಪೂರಯಂತಿ ಕಕುಭಃ ಪ್ರೋಂಛನ್ತಿ
ಕೌಕ್ಷೇಯಕಾನ್
ಅಭ್ಯಸಂತಿ ತಥೈವ ಚಿತ್ರಫಲಕೇ ಲಂಕಾಪತೇಸ್ತತ್ಪುನಃ
ವೈದೇಹೀ ಕುಚಪತ್ರವಲ್ಲಿರಚನಾ ಚಾತುರ್ಯಮರ್ಧೇ ಕರಾಃ ||
(೬-೧೭)

೧೦ ಬ್ರಹ್ಮ: ತನ್ನ ಪ್ರಪೌತ್ರನಾದ ರಾವಣನು ಸೀತಾಪಹಾರದಂತಹ ನೀಚಕೃತ್ಯವನ್ನು ಮಾಡಿದುದರಿಂದ ಚತುರ್ಮುಖಬ್ರಹ್ಮನಿಗೆ ತುಂಬಾ ನಾಚಿಕೆಯಾಯಿತು. ಆದರೂ

ಅವನಿಗೆ ನಾಲ್ಕು ಕಡೆಗೂ ತಲೆಗಳೇ ಇದ್ದುದರಿಂದ ತಲೆ ತಗ್ಗಿಸಲು ಅವಕಾಶವೇ ಆಗಲಿಲ್ಲ.

ವಿಷ್ವಗ್ವೃತ್ತಿರಶಂಗತಾನಮಯಿತುಂ ದುರ್ವಾರಲಜ್ಜಾಭರ
ಮ್ಲಾನಶ್ರೀಸ್ತು ಚತುರ್ಮುಖೀ ಭಗವತೋ ಧಾತುಃ
ಕಥಂ ವರ್ತತೇ ||
(೫–೧೪)

೧೧ 'ಸರಸ್ವತಿಯು ಬ್ರಹ್ಮನ ಮುಖಗಳಲ್ಲಿದ್ದಾಳೆ' ಎಂಬುದು ಪ್ರತೀತಿ. ಅದನ್ನು ಹೀಗೆ ವರ್ಣಿಸಿದೆ:

'ಬ್ರಹ್ಮನ ನಾಲ್ಕು ಮುಖಗಳೂ ಒಂದೇ ಕಂಠದಲ್ಲಿ ಸೇರಿರುವುದರಿಂದ ಅವನ ಕಂಠವು ನಾಲ್ಕು ಬೀದಿಗಳು ಸೇರುವ 'ಶೃಂಗಾಟಕ'(ಬೀದಿಚೌಕ)ವಾಗಿತ್ತು. ಇದರಿಂದ ಸರಸ್ವತಿಯು 'ಚತುರ್ಮುಖೀಕಂಠ ಶೃಂಗಾಟಕ ವಿಹಾರಿಣಿ' ಯಂತೆ!

(೧–೧೧)

೧೨ **ರಾವಣನ ಮೂರ್ಖತನ:** ಬ್ರಹ್ಮನಿಗಿರುವುದು ನಾಲ್ಕು ಮುಖ. ಅವುಗಳಲ್ಲಿ ಅವನು ನಾಲ್ಕು ವೇದಗಳನ್ನು ಮಾತ್ರ ಉಳಿಸಿಕೊಳ್ಳಬಲ್ಲ. ಇನ್ನು ಹದಿನಾಲ್ಕು ವಿದ್ಯೆಗಳಲ್ಲಿ ನಾಲ್ಕು ಬಿಟ್ಟರೆ 'ಷಡಂಗಗಳು' ಎಂದರೆ ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು ಜ್ಯೋತಿಷ, ಕಲ್ಪ ಎಂಬ ವೇದಾಂಗಗಳು ಆರು; ಮೀಮಾಂಸಾ, ನ್ಯಾಯ, ಧರ್ಮಶಾಸ್ತ್ರ ಮತ್ತು ಪುರಾಣ ಎಂಬ ನಾಲ್ಕು ಸೇರಿ (೬ + ೪=೧೦) ಹತ್ತು ಶಾಸ್ತ್ರಗಳಿಗಾಗಿ ತನ್ನ ಪ್ರಪೌತ್ರನಾದ ರಾವಣನಿಗೆ ಹತ್ತು ಶಿರಸ್ಸುಗಳನ್ನು ಕಲ್ಪಿಸಿ ಅಲ್ಲಿ

ಈ ಹತ್ತು ಶಾಸ್ತ್ರಗಳನ್ನು ಸ್ಥಾಪಿಸಿದನು. ಆದರೂ ರಾವಣನು ಜಡನಾದನು. ಎಂದರೆ ರಾವಣನು ಹತ್ತು ಶಾಸ್ತ್ರಗಳಲ್ಲಿ ಪ್ರವೀಣನಾದರೂ ಸೀತಾಪಹಾರದಂತಹ ನೀಚ ಕೃತ್ಯವನ್ನೆಸಗಿದನು.

(೬–೪)

೧೩. **ಮಂಡೋದರಿಯ ಬಯಕೆ:** ರಾವಣನು ಸತ್ತಮೇಲೆ ಮಂಡೋದರಿ ಪತಿವಿಯೋಗಕ್ಕಾಗಿ ರೋದಿಸ ತೊಡಗಿದಳು. ಸ್ತ್ರೀಯರು ಆಭರಣಪ್ರಿಯರಲ್ಲವೆ? ದುಃಖದಲ್ಲಿಯೂ ಅವರು ತಮ್ಮ ಆಭರಣಗಳ ಬಯಕೆಯನ್ನು ಮರೆಯುವುದಿಲ್ಲ. ಮಂಡೋದರಿಯು ರಾವಣನ ಗುಣಗಳನ್ನು ಒಂದೊಂದಾಗಿ ನೆನೆಸಿಕೊಂಡು ಅಳುತ್ತಾ ಹೇ ನಾಥ! ನೀನು ಗಣಪತಿಯ ಕುಂಭಸ್ಥಳದಲ್ಲಿಯ ಮುತ್ತುಗಳನ್ನು ತಂದು ನನಗೆ ಏಕಾವಳೀ ಸರ ಮಾಡಿಸುತ್ತೇನೆ ಎಂದು ಹೇಳಿದ್ದೆಯಲ್ಲವೆ? ಈ ಬಯಕೆಯನ್ನು ಪೂರೈಸದೆಯೇ ಮಡಿದೆಯಾ' ಎನ್ನುತ್ತಾಳೆ.

**"ಹಾ! ಲಂಬೋದರಕುಂಭಮೌಕ್ತಿಕಮಣಿಸ್ತೋಮೈರ್ಮಮೈಕಾವಲೀ ಶಿಲ್ಪೇ ವಾಗಧಮರ್ಣಿಕಸ್ಯ ಭವತೋ ಲಂಕೇಂದ್ರ ನಿದ್ರಾರಸಃ॥"**

(೬–೮೧)

೧೪. ಮಾಲ್ಯವಂತನು ಹಗಲಿರುಳೂ ನಿದ್ರೆಯಿಲ್ಲದೆ ಕಠಿನ ಸಮಸ್ಯೆಗಳನ್ನು ವಿಮರ್ಶಿಸುವುದರಲ್ಲಿ ತೊಡಗಿದ್ದನೆಂಬುದನ್ನು ಕವಿ ಹೀಗೆ ಹೇಳುತ್ತಾನೆ.: " ಶೂರ್ಪಣಖಿಯು ಮಿಥಿಲೆಯಿಂದ ಬಂದಾಗ ದೂರದಿಂದ ಮಾಲ್ಯವಂತನು ಆಕಳಿಸಿದುದನ್ನು ನೋಡಿದಳು. ಆಗ ಅವನ ಮುಖಕುಹರ(ಗುಹೆ)ದಲ್ಲಿ ಕಠಿನ ಸಮಸ್ಯೆ

ಗಳು ಫೇನೀಭೂತವಾಗಿ ಹೊಟ್ಟೆತುಂಬಿ ಗಂಟಲಿಗೆ ಬಂದಿರುವುದು ಕಾಣುತ್ತಿದ್ದುದರಿಂದ ಆವಳಿಗೆ ತಾತನ ಗುರುತೇ ಸಿಕ್ಕಲಿಲ್ಲವಂತೆ!

(ಅಂ. ೪. ಪು. ೧೫೦)

೧೫ **ಪರಶುರಾಮ:** ೨೧ ಸಲ ಭೂಪ್ರದಕ್ಷಿಣೆ! ಮಾಡಿ ಕ್ಷತ್ರಿಯರನ್ನು ಕೊಂದು ಆಯುಧ ವ್ಯಾಪಾರವನ್ನು ಬಿಟ್ಟದ್ದುದರಿಂದ ಪರಶುರಾಮನ ಆಯುಧಗಳು ತುಕ್ಕುಹಿಡಿದಿದ್ದವು. ಅವನ ಬತ್ತಳಿಕೆ ಜೀರ್ಣವಾಗಿತ್ತು. ಈಗ ರಾಮನು ಶಿವಧನುಸ್ಸನ್ನು ಮುರಿದುದರಿಂದ ಕೋಪಗೊಂಡು ಆಯುಧಧಾರಿಯಾಗಿ ಬರುವ ಅವಸರದಲ್ಲಿ ಅವುಗಳನ್ನು ಸರಿಪಡಿಸಿಕೊಂಡು ಬರುವುದಕ್ಕೂ ಅವನಿಗೆ ಅವಕಾಶವಾಗಲಿಲ್ಲ. ಆದುದರಿಂದ ಪರಶುರಾಮನು ತನ್ನ ಒರಟಾದ ಎದೆಯ ಮೇಲೆಯೇ ಆ ಆಯುಧಗಳನ್ನು ಮಸೆಯುತ್ತಲೂ, (೪–೧೮) ಮತ್ತು ತಾನು ಹೊದ್ದಿದ್ದ ದರ್ಭೆಯ ಮಡಿಪಂಚೆಯಿಂದ ಎಳೆಗಳನ್ನು ಕಿತ್ತು ಹಳೆಯ ಬತ್ತಳಿಕೆಯನ್ನು ಹೊಲಿದುಕೊಳ್ಳುತ್ತಲೂ ಬರುತ್ತಿದ್ದನು.

(೪–೧೯)

"ವಕ್ಷಃ ಪೀಠೇ ಘನಾಸ್ತ್ರವ್ರಣಕಿಣಕಠಿನೇ ಸಂಕ್ಷ್ಣುವಾನಃ"
ಪೃಷತ್ಕಾನ್
(೪–೧೮)

ತೂಣಾವೇವ ಪುನಸ್ತರಾಂ ದೃಢಯತಿ ಸ್ವಾದಂತರಸಾತ್ಕ್ರಪಟಾತ್
ಆಕೃಷ್ಟೈಃ ಕುಶಚೀರತಂತುಭಿರಭಿಕೃದ್ಧೋ
ಮುನಿಭಾರ್ಗವಃ
(೪–೧೯)

೧೬ **ಆಶ್ರಮ ವರ್ಣನೆ:** ಆಶ್ರಮ ವಟುಗಳು ದಾರಿಯ ಮಗ್ಗುಲಲ್ಲಿ ಸಾಮೆ ಅಕ್ಕಿಯನ್ನು ಇರುವೆ ಗೂಡುಗಳ ಸುತ್ತಲೂ ಮಂಡಲಗಳಂತೆ ಹಾಕಿದ್ದರು. ಇರುವೆಗಳು ಅಕ್ಕಿ ಕಾಳುಗಳನ್ನು ಕಚ್ಚಿಕೊಂಡು ಸಾಲಾಗಿ ಹೋಗುತ್ತಿದ್ದುದರಿಂದ ಆಶ್ರಮವೆಲ್ಲಾ ರಂಗೋಲೆಯಿಂದ ಅಂದವಾದ ಚಿತ್ರಗಳನ್ನು ಬರೆದಂತಿತ್ತು.

ವಿಷ್ವಕ್ತಪೋಧನಕುಮಾರಸಮರ್ಪ್ಯಮಾಣ
ಶ್ಯಾಮಾಕ ತಂಡುಲ ಹೃತಾಂ ಚ ಪಿಪೀಲಿಕಾನಾಮ್।
ಶ್ರೇಣೀಭಿರಾಶ್ರಮಪಥಾಃ ಪ್ರಥಮಾನಚಿತ್ರ
ಪತ್ರಾವಲೀ ವಲಯಿನೋ ಮುದಮುದ್ವಹಂತಿ॥

(೨-೨೨)

೧೭ ಆಶ್ರಮದಲ್ಲಿ ಬಲಿಹರಣಕ್ಕಾಗಿ ಇರಿಸಿದ ಅಕ್ಕಿಯನ್ನು ಅಲ್ಲಿ ಚಿರಪರಿಚಿತವಾದ ಒಂದು ಜಿಂಕೆಯು ಮೇಯಲಿಕ್ಕೆ ಬಂದಿತು. ಮುನಿವಧುಗಳು ಅದನ್ನು ಹೊಡೆದಟ್ಟಲು ಕೋಲನ್ನೆತ್ತಿದರು. ಎಂದೂ ಹೊಡೆತದ ಪರಿಚಯವೇ ಇಲ್ಲದ ಜಿಂಕೆ ಆ ಕೋಲನ್ನೇ ಮೂಸಿನೋಡತೊಡಗಿತು. ಋಷಿಗಳು ಇದನ್ನು ನೋಡಿ ನಗುತ್ತಿದ್ದರು.

ಬಾಲೇಯತಂಡುಲವಿಲೋಪಕದರ್ಥಿತಾಭಿ
ರೇತಾಭಿರಗ್ನಿಶರಣೇಷು ಸಧರ್ಮಿಣೀಭಿಃ।
ತತ್ರಾ ಸಹೇತುಮಪಿ ದಂಡಮುದಸ್ಯಮಾನ
ಮಾಘ್ರಾತುಮಿಚ್ಛತಿ ಮೃಗೇ ಮುನಯೋ ಹಸಂತಿ॥

(೨-೨೦)

೧೮ ಪಂಚವಟಿಯಲ್ಲಿನ ಒಂದು ದೃಶ್ಯವು ತುಂಬಾ ಅಂದವಾಗಿದೆ.: 'ಅರಣ್ಯದಲ್ಲಿ ಮಾವಿನಮರಗಳು ಹೇರಳವಾಗಿ ಹೂ ಬಿಟ್ಟವೆ. ವಸಂತಕಾಲವಾದ್ದರಿಂದ ಕೋಕಿಲವಧುಗಳು ಮಧುಪಾನಮತ್ತವಾಗಿ ತಮ್ಮ ಉತ್ಸಾಹದ ಕಲಕಲದಲ್ಲಿ ಕೊಂಬೆಗಳನ್ನು ಅಲುಗಿಸುತ್ತಿವೆ. ಇದರಿಂದ ಮಾವಿನಹೂವಿನ ಪರಾಗ(ಧೂಳಿ)ವು ಸುರಿದು ಮರಗಳ ಕೆಳಭಾಗವು ದಟ್ಟವಾದ ಮರಳುದಿಣ್ಣೆಯಂತಾಗಿದೆ. ವನದಲ್ಲಿ ಸಂಚರಿಸುವ ಹರಿಣಗಳು ಬೇಡರಿಗೆ ಅಂಜಿ ಬಹಳ ಕಷ್ಟದಿಂದ ಇಂತಹ ಮರಳಿನ ರಾಶಿಯಲ್ಲಿ ಹಾದು ಬಂದು ಮರಗಳ ನಡುವೆ ಮಲಗಿ ನಿರ್ಭಯವಾಗಿ ಮೆಲುಕುಹಾಕುತ್ತಿವೆ. ಏಕೆಂದರೆ ಮಾವಿನ ಹೂಗಳ ಧೂಳಿಯು ಧಾರಾಕಾರವಾಗಿ ಸುರಿಯುತ್ತಿರುವುದರಿಂದ ಅಲ್ಲಿ ಜಿಂಕೆಯ ಹೆಜ್ಜೆಯ ಗುರುತುಗಳೇ ಕಾಣದಿರುವುದರಿಂದ ಬೇಡರು ಅಲ್ಲಿ ಜಿಂಕೆಗಳು ಇರಲಾರವೆಂದೆಣಿಸಿ ಆ ಕಡೆ ಬರುತ್ತಿರಲಿಲ್ಲ.

ದೃಶ್ಯಂತೇ ಮಧುಮತ್ತ ಕೋಕಿಲ ವಧೂನಿರ್ಧೂತಚೂತಾಂಕುರ
ಪ್ರಾಗ್ಭಾರಪ್ರಸರತ್ಪರಾಗಸಿಕತಾದುರ್ಗಾಸ್ತಟೀಭೂಮಯಃ।
ಯಾಃ ಕೃಚ್ಛ್ರಾದತಿಲಂಘ್ಯ ಲುಬ್ಧಕಭಯಾತ್ತೈರೇವರೇಣೂತ್ಕರೈ
ರ್ಧಾರಾವಾಹಿಭಿರಸ್ತಿ ಲುಪ್ತ ಪದವೀ ನಿಃಶಂಕಮೇಣೀಕುಲಮ್

(೫–೬)

೧೯ **ಸೂರ್ಯೋದಯ:** ಹೆಣ್ಣು ಕತ್ತೆಯ ಕಿವಿಯಂತೆ ಕೆಂಪಾಗಿಯೂ, ಕುರಿಯ ಸುಳಿಯ ತುಪ್ಪಳಂತೆ ಅಂಚುಗಳಲ್ಲಿರುವ ಕತ್ತಲಿನಿಂದ ಮಸಕಾದ ಕಿರಣಗಳುಳ್ಳ ಸೂರ್ಯನು, ಮದಮತ್ತವಾಗಿ ಹಾಡುವ ಗುಬ್ಬಚ್ಚಿಗಳ ಶಬ್ದದೊಂದಿಗೆ ಮರಗಳ ಕೊಂಬೆಯೆಂಬ ಕೈಗಳಿಂದ ಮೇಲೇರಿಸಲ್ಪಡುತ್ತಿದ್ದಾನೆ.

**ಅಯಮಪಿ ಖರಯೋಽಷಿತ್ಕರ್ಣಕಾಷಾಯವಿಷ-**
**ದ್ವಿಸ್ಸೃಮರತಿವಿರೋರ್ಣಾ ಜರ್ಜರೋಪಾಂತಮರ್ಚಿ**
**ಮದಕಲಕಲವಿಂಕೀ ಕಾಕು ನಾಂದೀಕರೇ ಭ್ಯಃ**
**ಕ್ಷಿತಿರುಹಶಿಖರೇಭ್ಯೋ ಭಾನುಮಾನುಚ್ಚಿನೋತಿ||**

(೨–೮೫)

೨೦ ನೆನ್ನೆ ಸಂಜೆ ಸೂರ್ಯನು ಮುಳುಗುವಾಗ ಸಹಸ್ರ ದಳವುಳ್ಳ ಕಮಲವು ಸಹಸ್ರಕಿರಣ(ಸೂರ್ಯ)ನ ಸಾವಿರ ಕಿರಣಗಳನ್ನು ಎಣಿಸುವುದೋ ಎಂಬಂತೆ (ಎಣಿಸುವಾಗ ಕೈಬೆರಳು ಮಡಚಿದಂತೆ) ತನ್ನ ಸಾವಿರ ದಳಗಳನ್ನು ಮುಚ್ಚಿತು. ಈ ದಿನ ಬೆಳಿಗ್ಗೆ ಅದೇ ಸೂರ್ಯಕಿರಣಗಳನ್ನು ಎಣಿಸುವ ಕುತೂಹಲದಿಂದಲೇ ತನ್ನ ಸಾವಿರದಳಗಳನ್ನು ಅದು ಕ್ರಮವಾಗಿ ಅರಳಿಸಿತು.

**ಏಕದ್ವಿಪ್ರಭೃತಿಕ್ರಮೇಣ ಗಣನಾಮೇಷಾಮಿಹಾಸ್ತಂ ಯತಾಂ**
**ಕುರ್ವಾಣಾ ಸಮಕೋಚಯದ್ಧ ಶಶತಾನ್ಯಂಭೋಜ**
**ಸಂವರ್ತಿಕಾಃ !**
**ಭೂಯೋಽಪಿ ಕ್ರಮಶಃ ಪ್ರಸಾರಯತಿ ತಾಃ ಸಂಪ್ರತ್ಯ**
**ಮೂನುದ್ಯತಃ**
**ಸಂಖ್ಯಾತುಂ ಸಕುತೂಹಲೇವ ನಲಿನೀ ಭಾನೋಃ ಸಹಸ್ರಂ**
**ಕರಾನ್ ||**

(೨–೫

೨೧ **ಚಂದ್ರಾಸ್ತ :** ತಾರೆಗಳು ಬೆಳ್ಳುಳ್ಳಿಯಂತೆ ಅರೆಹಳದಿಯಿಂದ ಕೂಡಿದ ಮಧುರ ಛಾಯೆಯನ್ನು ತಾಳಿದವು. ಪೂರ್ವದಿಕ್ಕಿನಲ್ಲಿ ಕಮಲವನ್ನರಳಿಸುವ ಕಿರಣಗಳು ವ್ಯೈದೋರುತ್ತಿವೆ. ಜೇಡರ ಹುಳುವಿನ ಗೂಡಿನಂತೆ ಕಾಂತಿಹೀನನಾಗಿ ದುಂಡಗಿರುವ ಚಂದ್ರನು ಅಸ್ತಾಚಲವನ್ನು ಚುಂಬಿಸುತ್ತಿದ್ದಾನೆ.

ಜಾತಾಃ ಪಕ್ವಪಲಾಂಡುಪಾಂಡುಮಧುರಚ್ಛಾಯಾ
ಕಿರಸ್ತಾರಕಾಃ
ಪ್ರಾಚೀಮಂಕುರಯಂತಿ ಕಿಂಚನ ರುಚೋ ರಾಜೀವಜೀವಾತವಃ
ಲೂತಾತಂತುವಿತಾನವರ್ತುಲಮಿತೋ ಬಿಂಬಂ ದಧಜ್ಜೃಂಬತಿ
ಪ್ರಾತಃ ಪ್ರೋಷಿತರೋಚಿರಂಬರತಲಾದಸ್ತಾಚಲಂ ಚಂದ್ರಮಾಃ॥
(೨-೨)

೨೨ ರಾತ್ರಿಯಲ್ಲಿ ಚಂದ್ರನು ಮೇಲೆ ಬಂದಾಗ ಮರಗಳ ನೆರಳು ಕೆಳಗೆ ಬಿದ್ದಿರುವುದನ್ನು ಕವಿ ಹೀಗೆ ವರ್ಣಿಸಿದ್ದಾನೆ: ಬಹಳ ಬಗ್ಗಡವಾದ ನೀರಿನಲ್ಲಿ ಕತಕ(ಚಿಲ್ಲದ ಬೀಜ)ದ ಹುಡಿಯನ್ನು ಹಾಕಿದರೆ ಕೆಸರು ತಳಕ್ಕಿಳಿದು ನೀರು ತಿಳಿಯಾಗುತ್ತದೆಯೆಂದು ಪ್ರತೀತಿ ಇದೆ. ಇದನ್ನು ಕವಿಯು ಕತ್ತಲೆಯೆಂಬ ಸಮುದ್ರದಲ್ಲಿ ಚಂದ್ರಕಿರಣವೆಂಬ ಕತಕ ಧೂಳಿಯುದುರಿ ಆ ಸಮುದ್ರದ ಕೆಸರು ಕೆಳಗಿಳಿಯಿತೋ ಅಥವಾ ಚಂದ್ರಕಿರಣಗಳೆಂಬ ಬಾಚಿಗಳಿಂದ ಕೆತ್ತುವಾಗ ಉದುರಿದ ಆಕಾಶದ ತೊಗಟೆಯ ಚೂರುಗಳೊ ಎಂಬಂತೆ ನೆರಳು ಕಾಣುತ್ತಿತ್ತು.
(೨-೭೫)

೨೩ ಕೃಷ್ಣಪಕ್ಷದಲ್ಲಿ ತಾರೆಗಳು ಹೇರಳವಾಗಿರುವುದಕ್ಕೂ ಶುಕ್ಲಪಕ್ಷದಲ್ಲಿ ಅವು ಕಡಮೆಯಾಗಿರುವುದಕ್ಕೂ ಹೀಗೆ ಕಾರಣವನ್ನು ಊಹಿಸುತ್ತಾನೆ: ಸಾಯಂಕಾಲದ ಸೂರ್ಯತಾಪ (ಬಿಸಿಲು)ವೆಂಬ ಬೆಂಕಿಯಲ್ಲಿ ಆಕಾಶವೆಂಬ ಮೂಸೆಯನ್ನಿಟ್ಟು ನಕ್ಷತ್ರಗಳನ್ನು ಕರಗಿಸಿ ಚಂದ್ರನನ್ನು ತಯಾರಿಸುತ್ತಿರುವುದರಿಂದ ಶುಕ್ಲಪಕ್ಷದಲ್ಲಿ ನಕ್ಷತ್ರಗಳು ಕಡಮೆಯಾಗುತ್ತವೆ; ಚಂದ್ರನು ಮಾತ್ರ ದಿನೇ ದಿನೇ ದಪ್ಪವಾಗುತ್ತಾನೆ. ಕೃಷ್ಣಪಕ್ಷದಲ್ಲಾದರೆ

ಚಂದ್ರನು ದಿನ ದಿನವೂ ಕ್ಷೀಣವಾಗುವುದರಿಂದ ನಕ್ಷತ್ರಗಳು ಹೆಚ್ಚಾಗಿ ಕಾಣುತ್ತವೆ.

ಭೂಯಸ್ತರಾಣಿ ಯದಮೂನಿ ತಮಸ್ವಿನೀಷು
ಜ್ಯೌತ್ಸ್ನೀಷು ಚ ಪ್ರವಿರಲಾನಿ ತತಃ ಪ್ರತೀಮಃ ।
ಸಂಧ್ಯಾನಲೇನ ಭೃಶಮಂಬರಮೂಷಿಕಾಯಾ
ಮಾವರ್ತಿತೈರುಡುಭಿರೇವ ಭೃತೋಽಯಮಿಂದುಃ ॥

(೨–೮೧)

೨೪ **ಶಿವನ ಅರ್ಧನಾರೀಶ್ವರ ಲೀಲೆ:** ಶಿವನ ಮತ್ತು ಉಮೆಯ ಶರೀರಗಳನ್ನು ಎರಡೆರೆಡು ಹೋಳುಮಾಡಿ ಶಿವನ ಶರೀರದ ಬಲಭಾಗ ಮತ್ತು ಉಮೆಯ ಶರೀರದ ಎಡಭಾಗ ಒಂದಾಗಿ ಸೇರಿ ಅರ್ಧನಾರೀಶ್ವರನಾದನು. ತರುವಾಯ ಪಾರ್ವತಿಯ ಸಖಿಯರು ತಮಾಷೆಗಾಗಿ ಉಳಿದ ಎರಡು ಹೋಳುಗಳನ್ನು ಸೇರಿಸಿ ಮತ್ತೊಬ್ಬ ಅರ್ಧನಾರೀಶ್ವರನನ್ನು ಮಾಡಿದರು.

ಏತಸ್ಯಾಂಹಿ ತುಷಾರಭೂಧರಶಿರಃ ಸೀಮ್ನಿ ಪ್ರಿಯಾರ್ಧೇನ ಚ
ಸ್ವೇನಾರ್ಧೇನ ಚ ತಾದೃಶೇ ಪಶುಪತೌ ವೃತ್ತೇಽರ್ಧನಾರೀಶ್ವರಃ।
ಶೇಷೇಣಾರ್ಧಯುಗೇನ ಸಪ್ರಹಸನಂ ಗೌರೀಸಖೀಭಿಸ್ತದಾ
ಚಕ್ರೇ ದಕ್ಷಿಣವಾಮಯೋರ್ವಿನಿಮಯಾದನ್ಯೋಽರ್ಧನಾರೀಶ್ವರಃ ॥

(೭–೩೬)

೨೫ ಶಿವನು ತನ್ನ ಜಡೆಗಳನ್ನು ಸರ್ಪದಿಂದ ಬಿಗಿದನು. ಇದರಿಂದ ಸರ್ಪಕ್ಕೆ ಆಯಾಸವಾಗಿ ತಾಪ ಹೆಚ್ಚಿತು. ತಾಪದ ಉಪಶಾಂತಿಗಾಗಿ ಅದು ಪಕ್ಕದಲ್ಲಿ ತಣ್ಣಗಿರುವ ಚಂದ್ರನನ್ನು

ಬಾಯಲ್ಲಿ ಕಚ್ಚಿಕೊಂಡಿತು. ಇದರಿಂದ ಚಂದ್ರನು ಮುಕ್ಕಾದನು. ಹೀಗೆ ಮುಕ್ಕಾದ ಚಂದ್ರನನ್ನು ಮತ್ತೆ ದುಂಡಗೆ ಮಾಡಲು ಅವನನ್ನು ಹಣೆಗಣ್ಣಿನ ಬೆಂಕಿಯಲ್ಲಿ ಕಾಯಿಸಲು ಸರ್ಪಮುಖವೆಂಬ ಇಕ್ಕಳದಿಂದ ಚಂದ್ರನನ್ನು ಹಿಡಿಯಲಾಗಿದೆಯೋ ಎಂಬಂತೆ ಈ ದೃಶ್ಯ ಕಾಣುತ್ತಿತ್ತು.

ಶ್ರೀಕಂಠಸ್ಯ ಕಪರ್ದಬಂಧನಪರಿಶ್ರಾಂತೋರಗಗ್ರಾಮಣೀ
ಸಂದಷ್ಟಾಂ ಮುಕಟಾವತಂಸಕಲಿಕಾಂ ವಂದೇಕಲಾಮೈಂದವೀಂ
ಯಾ ಬಿಂಬಪ್ರತಿಪೂರಣಾಯ ಪರಿತೋ ನಿಷ್ಪೀಡ್ಯ ಸಂದಂಶಿಕಾ-
ಯಂತ್ರೇಣೇವ ಲಲಾಟ ಲೋಚನಶಿಖಿಜ್ವಾಲಾಭಿರಾವರ್ತ್ಯತೇ ||

(೭–೩೩)

೨೬ ಶಿವನು ತ್ರಿಪುರಸಂಹಾರ ಕಾಲದಲ್ಲಿ ಧನುಸ್ಸನ್ನು ಕಿವಿಯವರೆಗೆ ಎಳೆದಾಗ ಅವನ ಕೈತಗುಲಿ ಶಿವನ ಕರ್ಣಾಭರಣವು ಕಳಚಿ ಬೀಳುವುದಕ್ಕೆ ಬದಲಾಗಿ ತ್ರಿಪುರ ವಧುಗಳ ಕರ್ಣಾಭರಣಗಳು ಕಳಚಿದವು. ಬಾಣ ಬಿಟ್ಟಮೇಲೆ ಶಿಂಜಿನಿ (ಹೆದೆ)ಯು ಮುಂಗೈಗೆ ತಾಕಿದಾಗ ಶಿವನ ಕೈಕಂಕಣ ಕಳಚುವುದಕ್ಕೆ ಬದಗಿಲಾ ತ್ರಿಪುರ ಸ್ತ್ರೀಯರ ಕೈಬಳೆಗಳು ಒಡೆದು ಬಿದ್ದವು.

(೪–೨೧)

೨೭ ತ್ರಿಪುರಸಂಹಾರ ಕಾಲದಲ್ಲಿ ವಿಷ್ಣು ಶಿವನಿಗೆ ಬಾಣವಾದನು. ಆದಿಶೇಷನು ಶಿಂಜಿನಿಯಾದನು. ಧನುರಾರೋಪಣ ಸಮಯಕ್ಕೆ ಗರುಡನು ತನ್ನ ಒಡೆಯನ ಹತ್ತಿರಕ್ಕೆ ಪದ್ಧತಿಯ ಪ್ರಕಾರ ಬಂದನು. ಆದರೆ ಸಂಕ್ರುದ್ಧನಾದ ರುದ್ರನ ಉರಿಗಣ್ಣಿನ ಕಿಡಿಗಳು ತೀವ್ರವಾಗಿ ಸಿಡಿಯುತ್ತಿದ್ದುದರಿಂದ ತನ್ನ

ಪುಕ್ಕಗಳಿಗೆ ಎಲ್ಲಿ ಬೆಂಕಿ ಬೀಳುವುದೋ ಎಂಬ ಹೆದರಿಕೆಯಿಂದ ಗರುಡನು ಹಿಂದಕ್ಕೆ ಹೋದನು. ಇದರಿಂದ ಶಿವನಿಗೆ ಉಪಕಾರವೆ ಆಯಿತಂತೆ! ಏನೆಂದರೆ ಗರುಡನು ಬಂದಾಗ ಶಿಂಜಿನಿಯಾಗಿದ್ದ ಆದಿಶೇಷನು ಹೆದರಿಕೆಯಿಂದ ಕುಗ್ಗಿ ಗರುಡನು ಹೋದ ಮೇಲೆ ಮೇಲಕ್ಕೆದ್ದನು. ಇದರಿಂದ ಶಿವನ ಪ್ರಯತ್ನವಿಲ್ಲದೆಯೇ ಧನುಸ್ಸು ಎಳೆಯಲ್ಪಟ್ಟು ಲಕ್ಷ್ಯವು ಭೇದಿಸಲ್ಪಟ್ಟಿತು.

ಬಾಣೀಭೂತಪುರಾಣಪೂರುಷಧೃತಿಪ್ರತ್ಯಾಶಯಾ ಧಾವಿತೇ।
ವಿದ್ರಾತಿಸ್ಫುರದಾಶುಶುಕ್ಷಣಿಕಣಕ್ಲಾಂತೇ ಶಕುಂತೇಶ್ವರೇ ।
ನವ್ಯೇಸ್ತ್ರೇನ್ನಮ್ರಭುಜಂಗಪುಂಗವಗುಣವ್ಯಾಕೃಷ್ಟಬಾಣಾಸನ-
ಕ್ಷಿಪ್ತಾಸ್ತ್ರಸ್ಯ ಪುರದ್ರುಹೋ ವಿಜಯತೇ ಸಂಧಾನಸೀಮಾಶ್ರಮ॥
(೭-೧೧೪.)

೨೮ ಶಿವನು ತ್ರಿಪುರಸಂಹಾರದಲ್ಲಿ ಧನುಸ್ಸನ್ನು ಕಿವಿಯ ವರೆಗೆಳೆದಾಗ ಶಿಂಜಿನಿಯಾದ ಆದಿಶೇಷನು ಶಿವನ ಕಿವಿಗೆ ಕರ್ಣಾಭರಣವಾಗಿಯೂ, ಬಾಣಬಿಟ್ಟು ಮುಂಗೈಗೆ ಶಿಂಜಿನಿಯು ಬಂದಾಗ ಕಂಕಣವಾಗಿಯೂ ಆಗುತ್ತಿದ್ದನು.

ಯಸ್ಮಿನ್ನೇಕ ಧನುಷ್ಮತೋ ಭಗವತಃ ಖಟ್ವಾಂಗಪಾಣೇರಸಾ-
ವಾಕೃಷ್ಟ್ಯೋ ಗುಣತಾಂಗತೋಽಪ್ಯಹಿಪತಿಃ ಕರ್ಣಾವ
ತಂಸಾಯತೇ
ಉನ್ಮುಕ್ತಃ ಪುನರೇವ ಭೂಷಣಪದಂ ಯಾತಿ ಪ್ರಕೋಷ್ಠಾಂತರೇ
(೩-೫೩)

೨೯ ವಿಕಾರ ರೂಪುಗಳುಳ್ಳ ವಸ್ತುಗಳನ್ನು ಕವಿ ಮೃದು ಹಾಸ್ಯದಿಂದ ವರ್ಣಿಸುತ್ತಾನೆ: ರುಚಿಯನ್ನು ನೋಡಲು ಒಂದು

ನಾಲಿಗೆಗೆ ಬದಲಾಗಿ ಎರಡುನಾಲಿಗೆ! ನೋಡುವುದಕ್ಕೂ ಕೇಳುವುದಕ್ಕೂ ಎರಡು ಇಂದ್ರಿಯಗಳಿಗೆ ಬದಲಾಗಿ ಒಂದೇ ಇಂದ್ರಿಯ (ಸರ್ಪಗಳಿಗೆ ಚಕ್ಷುಃ ಶ್ರವಸ್ ಎಂದರೆ ಕಣ್ಣೇ ಕಿವಿ)! ನಡೆಯಲಿಕ್ಕೆ ಕಾಲಿಗೆ ಬದಲಾಗಿ ಎದೆ! ಲೋಕದಲ್ಲಿ ತಿನ್ನಲಿಕ್ಕೆ ಬೇಕಾದಷ್ಟು ವಸ್ತುಗಳಿದ್ದರೂ ಜನರ ಪ್ರಾಣ (ವಾಯು) ವನ್ನು ಸೇವಿಸುವುದು! ಆಹ! ಹೇ ಕದ್ರು! (ಸರ್ಪಗಳ ತಾಯಿ) ಇಂತಹ ಮಕ್ಕಳನ್ನು ಹೇಗೆ ಹಡೆದೆಯಮ್ಮ!"

ದ್ವೇತಾವತ್ಕರಣೇ ರಸಾನ್ ರಸಯಿತುಂ ಶಬ್ದಾಂಶ್ಚ ರೂಪಾಣಿ ಚ
ಶ್ರೋತುಂ ದ್ರಷ್ಟುಮಥೈಕಮಿಂದ್ರಿಯಮುರೋಗತ್ಯೈ
ನಿಗೂಢಂ ಪದಂ।
ಅನ್ಯೇಷ್ವಪ್ಯಶನೇಷುಸತ್ಸು ಜಗತಃ ಪ್ರಾಣಾಃ ಸ್ವದಂತೇತರಾಂ
ಮಾತಃ ಕದ್ರು ಯದಿ ಪ್ರಸೌತಿ ಭವತೀ ಭೂಯಃ ಸುತಾನೀ
ದೃಶಾನ್॥
(೭–೮)

ಹೀಗೆ ಮುರಾರಿಯು ಯಾವ ವಿಷಯವನ್ನು ತೆಗೆದುಕೊಂಡರೂ ಯಾರೂ ಹೇಳದ ತನ್ನದೇ ಆದ ವಿಶಿಷ್ಟರೀತಿಯಲ್ಲಿ ನಾನಾ ಮುಖವಾಗಿ ವರ್ಣಿಸುತ್ತಾನೆ. ಕಡೆಯಿಲ್ಲದ ಪಾಂಡಿತ್ಯ ಭಂಡಾರವೇ ಅವನದಾಗಿದೆಯೆಂಬುದು ಇದರಿಂದ ವೇದ್ಯವಾಗುತ್ತದೆ.

## ಶೈಲಿ

ಮುರಾರಿಯ ನಾಟಕದ ಪ್ರಸ್ತಾವನೆಗೂ ರಾಜಶೇಖರನ ನಾಟಕಗಳ ಪ್ರಸ್ತಾವನೆಗೂ ಕೊಂಚ ಸಾದೃಶ್ಯ

ವಿರುವುದರಿಂದ ಇಬ್ಬರೂ ಸಮಕಾಲೀನರಿದ್ದರೂ ಇರಬಹುದೆಂದು ಕೆಲವರು ಊಹಿಸುತ್ತಾರೆ. ಆದರೆ ಹೆಚ್ಚಾಗಿ ಭವಭೂತಿಯನ್ನು ಮುರಾರಿಯು ಅನುಸರಿಸುವಂತೆ ತೋರುತ್ತದೆ. ಮುರಾರಿಯ ಶೈಲಿ ಮಾತ್ರ ಅವನದೇ ಆದ ಒಂದು ವಿಶಿಷ್ಟಮಾರ್ಗ. ಪ್ರಾಯಃ ಇವನು ಹೇಳಿಕೊಳ್ಳುವಂತೆ ಅದು ' ಗಂಭೀರತೆ ' ಯುಳ್ಳದ್ದು. ' ಗಂಭೀರೋದಾತ್ತವಸ್ತುವೇ ' (೧-೬) ' ಗಂಭೀರ ಮಧುರೋದ್ಗಾರಾಃ ಗಿರಾಂವ್ಯೂತಯಃ (೧-೮) ' ಗಂಭೀರ ಮಧುರ ಸ್ಫುರದ್ವಾಗ್ಬ್ರಹ್ಮಣಃ ' (೮-೯) ' ಗಂಭೀರ ಮನೋಹರಾಣಿ ವಚಾಂಸಿ ' (೧-೧೨) ' ಅಹೋ ಗಂಭೀರಮಿದಮುಪಸ್ಥಿತಂ ವಸ್ತು ' (೩-೬೧).

ಮುಂತಾದ ವಾಕ್ಯಗಳಿಂದ ಮುರಾರಿಯ ಶೈಲಿಯಲ್ಲಿ ಒಂದು ಗಾಂಭೀರ್ಯ ತುಂಬಿದೆಯೆಂದು ಸ್ಪಷ್ಟವಾಗುತ್ತದೆ. ನಾಟಕವನ್ನು ಮಧ್ಯದೇಶಿಯನಾದ ' ಸುಚರಿತ ' ನು ಪುರುಷೋತ್ತಮನ ಯಾತ್ರೆಯ ಸಂದರ್ಭದಲ್ಲಿ ಪ್ರಯೋಗಿಸಿರುವಂತೆ ಪ್ರಸ್ತಾವನೆಯಿಂದ ಗೊತ್ತಾಗುತ್ತದೆ. ಇವನ ಪಾಂಡಿತ್ಯ ಜಯದೇವ ಮುಂತಾದವರ ಪಾಂಡಿತ್ಯಕ್ಕಿಂತ ಘನಿಷ್ಠವಾದುದು. ಆದುದರಿಂದ ಇವನಪಾತ್ರಗಳೂ ಪರಿಷ್ಕಾರವಾಗಿ ಪ್ರೌಢವೂ ಪಾಂಡಿತ್ಯಪೂರ್ಣವೂ ಆಗಿವೆ. ಮಾತುಗಳೂ ವರ್ಣನೆಗಳೂ ಲಂಬಿಸುತ್ತವೆ,

ಎರಡನೆಯ ಅಂಕದ ವಿಷ್ಕಂಭಕದಲ್ಲಿ ಪಾತ್ರವರ್ಣನೆಗೇ ಹತ್ತು ಪದ್ಯಗಳಿವೆ. ಅಪೂರ್ವವೂ ಕ್ಲಿಷ್ಟವೂ ಆದ ವ್ಯಾಕರಣ ಪ್ರಯೋಗಗಳು ಹೇರಳವಾಗಿವೆ. ಇದರಿಂದ ಮುರಾರಿಯ ಶೈಲಿ ಜಟಿಲ. ಆದರೆ ವರ್ಣನೆಗಳಲ್ಲಿ ಲಾಲಿತ್ಯ, ಸರಳತೆಗಳಿಲ್ಲದಿಲ್ಲ.

ಶಾಸ್ತ್ರ ಪ್ರಕ್ರಿಯೆಗಳ ಪರಿಚಯವಿದ್ದರೆ ಮಾತ್ರ ಸುಲಭವಾಗಿ ಅರ್ಥವಾಗುತ್ತದೆ. ಪದ್ಯಗಳಲ್ಲಿ ಕಾರ್ಯ ಕಾರಣಭಾವ, ಅನ್ವಯು ಗಳೂ ಬಹಳ ಚೆನ್ನಾಗಿವೆ. ಶೈಲಿಯು ಮನೋಹರವಾಗಿದೆ. ಗದ್ಯ ಶೈಲಿಯು ಮಾತ್ರ ಕೊಂಚ ಪೆಡಸು. ಲಾಕ್ಷಣಿಕ ಮತ್ತು ಯೌಗಿಕ ಪದ ಪ್ರಯೋಗದಲ್ಲಿ ಮುರಾರಿಗೆ ತುಂಬಾ ಆವರ. ಇದ ರಿಂದ ಇವನ ಕಾವ್ಯ ಶೈಲಿಯು ಕಲ್ನೆಲದಲ್ಲಿ ಡೊಂಕು ಡೊಂಕಾಗಿ ಹರಿಯುವ ಸಣ್ಣ ಹೊಳೆಯಂತೆ ತಡೆ ತಡೆದು ಹರಿದಿದೆ. ಅನೇಕ ಕಡೆ ಭಾವವೂ ಇಂಗಿದೆ.

ಬಯ್ಯುವಾಗಲೂ ಅವನು ತನ್ನ ತತ್ತ್ವವನ್ನು ಮರೆಯು ವುದಿಲ್ಲ. ಶೌಷ್ಕಲನು ಶತಾನಂದನನ್ನು ನಿಂದಿಸುವಾಗ

'ಯದಿವಾ ತತ್ರ ಭವಂತಂ ಗೌತಮುಪಹಾಯ ಡುಲಿಚ ಕ್ಷುಷಿ ಸಹಸ್ರಾಕ್ಷೇ ಭವತೋ ಮಾತುರಹಲ್ಯಾಯಾಃ' ಎಂದು ಬಿಡುತ್ತಾನೆ.

ಎಂದರೆ ಇಂದ್ರನಿಗೆ 'ಪಿಂಗಲಾಕ್ಷ' ನೆಂದು ಶ್ರುತಿ. ಕಣ್ಣಿಗೂ ಆಮೆಗೂ ಹೋಲಿಕೆಯಿದೆ. ಆದುದರಿಂದ ಇಂದ್ರನನ್ನು 'ಡುಲಿಚಕ್ಷುಃ' (ಆಮೆಯಂತೆ ಕಣ್ಣುಳ್ಳವನು) ಎಂದು ಪ್ರಯೋಗಿಸಿದ್ದಾನೆ ಮತ್ತು ಇಂದ್ರನಿಗಿರುವ 'ಅಹಲ್ಯಾಯೈ ಜಾರ' ಮುಂತಾದ ಇಂದ್ರನ ಚಾಪಲ್ಯ ಸೂಚಕವಾದ ವಿಶೇಷಣ ಗಳನ್ನೂ ಸೇರಿಸದೆ ಬಿಡುವುದಿಲ್ಲ. ಏನಯ್ಯ ಶತಾನಂದ! ನಿನ್ನಂತಹ ಪೂಜ್ಯನಾದ (ಗೌತಮ) ಸುತನನ್ನು ಉಪೇಕ್ಷಿಸಿ ನಿಮ ತಾಯಿ ಅಹಲ್ಯೆ ಆ ಪಿಂಗಲಾಕ್ಷ(ಆಮೆಗಣ್ಣ)ನನ್ನು

ವರಿಸಿ ಹೋದಳಲ್ಲ!" ಎಂಬ ಮಾತು ಮುರಾರಿಯ ವಾಗ್ವೈಖರಿಗೆ ನಿದರ್ಶನ.

ಶತಾನಂದನು ಪರಶುರಾಮನನ್ನು ಧಿಃಕರಿಸಿ 'ಬ್ರಹ್ಮತೇಜಸ್ವಿಗಳಾದ ನಮ್ಮೆದುರಿನಲ್ಲಿಯೂ ಹೀಗೆ ನುಡಿಯುವುದೇ?' ಎನ್ನುತ್ತಾನೆ. ಆಗ ಪರಶುರಾಮನು ಕ್ರುದ್ಧನಾಗಿ 'ನೀನು ಸರಿಯಾದ ಬ್ರಾಹ್ಮಣನೇ ಅಲ್ಲ' ವೆಂಬುದನ್ನು ಹೀಗೆ ಹೇಳುತ್ತಾನೆ. 'ಒಮ್ಮೆ ಬ್ರಹ್ಮಗಣವು ವ್ಯಾಕರಣದಲ್ಲಿ ಬರುವ ಪೃಷೋದರಾದಿ ಗಣದಂತೆ ಆಕೃತಿಗಣವಾಗಿದ್ದಿದ್ದರೆ; ನಿನ್ನನ್ನು ಆಕಾರ ಮಾತ್ರದಿಂದ ಬ್ರಾಹ್ಮಣನೆನ್ನಬಹುದಾಗಿತ್ತು!'

ವಿಶ್ವಾಮಿತ್ರನು ಮೊದಲು ಕ್ಷತ್ರಿಯನಾಗಿದ್ದುದರಿಂದ ಈಗ ಅವನು ಬ್ರಾಹ್ಮಣನಾಗಿದ್ದರೂ "ಸ್ಥಾನಿವದಾದೇಶಃ" (ಪಾ. ಸೂ. ೧-೧-೫೬) ಎಂಬ ಪಾಣಿನಿ ಸೂತ್ರದಿಂದ ಸ್ಥಾನಿವದ್ಭಾವ ಹೊಂದಿ ಹಿಂದಿನ ಕ್ಷತ್ರಿಯೋಚಿತ ಕಾರ್ಯಗಳನ್ನೇ ಮಾಡುತ್ತಿದ್ದಾನೆ.

ವಿಶ್ವಾಮಿತ್ರನು 'ದ್ವಿಜ' ನಾಗುವುದಕ್ಕೆ ಬದಲಾಗಿ 'ಕ್ಷತ್ರಿಯತ್ವ' ಬ್ರಾಹ್ಮಣ್ಯ ಮತ್ತು ಬ್ರಾಹ್ಮ್ಯಗಳಿಂದ 'ತ್ರಿಜ' ನಾಗಿರುತ್ತಾನೆ. ಹೀಗೆ ಪ್ರಕೃತಿಯಿಂದಲೇ ವಕ್ರನಾದವನಿಂದ ಶಿಕ್ಷಣ ಪಡೆದ ಋಜುಬುದ್ಧಿಯಾದ ರಾಮನೂ ನೀಚನೇ ಆಗುತ್ತಾನೆ. ಬೆಳಕು ಒಳ್ಳೆಯದಾದರೂ ಸರ್ಪಫಣಾಮಣಿಯ ಬೆಳಕು ಭಯಂಕರ!' ಎಂಬ ಮಾಲ್ಯವಂತನ ಮಾತಿನಲ್ಲಿ ಅಸೂಯೆಯೂ, 'ರಾಮ' ಲಕ್ಷ್ಮಣ ಮತ್ತು ಜನಕರೊಂದಿಗಿರುವ ವಿಶ್ವಾಮಿತ್ರನು

ಋಗ್ಯಜುಸ್ಸಾಮಗಳ ಜೊತೆಯಲ್ಲಿ ಅಭಿಚಾರಕರ್ಮಗಳಿಂದ ಕೂಡಿದ ಅಥರ್ವವೇದದಂತೆ ಇದ್ದಾನೆ' ಎಂದು ಹೇಳುವ ಶೌಷ್ಕಲನ ಮಾತಿನಲ್ಲಿ ವಿದ್ವೇಷವೂ ಎದ್ದು ಕಾಣುತ್ತವೆ.

ಭವಭೂತಿಯು "ವಿಶ್ವಾಮಿತ್ರಾತ್ ಪ್ರಾಪ್ಯ ವಿಶ್ವಸಖಿ ಮಿತ್ರಾತ್" (೧-೨೦) ಎಂದು ಹೇಳಿರುವುದನ್ನು ಮುರಾರಿಯು ಶೌಷ್ಕಲನ ಮಾತಿನಲ್ಲಿ ಮತ್ತಷ್ಟು ಚಮತ್ಕಾರವಾಗಿ ವಿರುದ್ಧಾರ್ಥ ದಲ್ಲಿ ಪ್ರಯೋಗಿಸುತ್ತಾನೆ :-

'ಕಥಮೇವಂ ಜನಕಶತಾನಂದಾಭ್ಯಾಂ ಪುರಸ್ಕೃತೋ ವಿಶ್ವೇಷಾಂ ಅಸ್ಮಾಕಮಮಿತ್ರೋ ವಿಶ್ವಾಮಿತ್ರಃ' 'ಜನಕ ಮತ್ತು ಶತಾನಂದರ ಜೊತೆಗಿರುವ, ನಮ್ಮೆಲ್ಲರಿಗೂ ಶತ್ರುವಾದ ವಿಶ್ವಾಮಿತ್ರನು ಇಲ್ಲಿಯೇ ಇರುವನಲ್ಲ!' ಎಂದು ತಿರುಗಿಸಿದ್ದಾನೆ. ಭವಭೂತಿಯು 'ವಿಶ್ವಸ್ಯ ಮಿತ್ರಾತ್ ಜಗತ್ತಿಗೆ ಮಿತ್ರನಾದ ವಿಶ್ವಾಮಿತ್ರ' ಎಂದರೆ ಮುರಾರಿಯು ಶತ್ರುವಿನ ಮುಖದಿಂದ 'ನಮಗೆಲ್ಲ ಶತ್ರುವಾದ "ವಿಶ್ವೇಷಾಮಮಿತ್ರಃ" ಜಗತ್ತಿಗೆ ಶತ್ರು ಎಂದು ವಿರುದ್ಧಾರ್ಥದಲ್ಲಿ ನಿರ್ವಚನಮಾಡಿದ್ದಾನೆ.

ಶಾಸ್ತ್ರದಲ್ಲಿ ಸಂಕೇತವಾಗಿ ಬರುವ ಅಧಿಕರಣ, ಉತ್ಸರ್ಗ, ಅಪವಾದ ಉಪಸರ್ಜನ, ಹೇತುಮತ್ವ ಮುಂತಾದುವನ್ನು ಹಾಗೆ ಹಾಗೆಯೇ ಶ್ಲೋಕಗಳಲ್ಲಿ ಸೇರಿಸುತ್ತಾನೆ ರಸಭಾವಾದಿಗಳನ್ನು ಆಲಂಕಾರಿಕರು ಹೇಳುವಂತೆ ವ್ಯಂಗ್ಯವಾಗಿ ಹೇಳದೆ ಅನೇಕ ಕಡೆ ಶಬ್ದಗಳಿಂದಲೇ ವರ್ಣಿಸುವುದೂ ಉಂಟು. ತಾಟಕಿಯು ಸತ್ತಾಗ ಆಶ್ರಮವಾಸಿಗಳು

ಕೃತ್ವೋನ್ಮುಕ್ತಾ ಭುವಿ ಚ ಕರುಣಾಶ್ಚರ್ಯಬೀಭತ್ಸ
ಹಾಸಕೋಧೋತ್ತರಲವ್ಯುಷಿಭಿರ್ದೃಶ್ಯತೇತಾಟಕೇಯಂ "

ಎಂದು ' ನಾನಾ ರಸಭಾವಗಳಿಂದ ನೋಡಿದ್ದರು ' ಎನ್ನು ತ್ತಾನೆ. ಆದರೆ ಆಲಂಕಾರಿಕ ಸಿದ್ಧಾಂತದಂತೆ ರಸ ಭಾವಾದಿಗಳು ವ್ಯಂಜನಾಮರ್ಯಾದೆಯಿಂದ ತೋರಬೇಕೆ ಹೊರತು ರಸಾದಿವಾಚಕ ಶಬ್ದಗಳಿಂದ ಉಚ್ಚರಿಸಿದರೆ ಅವು ಉಂಟಾಗತಕ್ಕವುಗಳಲ್ಲ.

ರಾಮನು ಸೀತಾವಿಯೋಗದಿಂದ ದುಃಖಿಸುವಾಗಲೂ ಸಹ ' ಇಯಮವಿರಲತ್ರಾಸಾ ' ಎಂದಾರಂಭಿಸಿ ಮಯಿ ರಸತಯಾ ಶೋಕೋ ಭಾವಶ್ಚಿರೇಣ ವಿಪಚ್ಯತೇ " ಎಂದಿದ್ದಾನೆ.

## ಭವಭೂತಿ ಮತ್ತು ಮುರಾರಿಯ ಕೆಲವು ಹೋಲಿಕೆಗಳು

ಕಥಾ ಸಂವಿಧಾನದ ವಿಷಯದಲ್ಲಿ ಮುರಾರಿಯು ಭವ ಭೂತಿಗಿಂತಲೂ ಸುಧಾರಿಸಿದ್ದರೂ ಕಾವ್ಯರಚನಾ ಕೌಶಲದಲ್ಲಿ ಭವಭೂತಿಯದು ಸಿದ್ಧಹಸ್ತ. ಭವಭೂತಿ ಹುಟ್ಟುಕವಿ. ವಶ್ಯ ವಾಕ್. ಅವನ ಭಾವಾವೇಶದಿಂದ ಮುನ್ನುಗ್ಗಿ ಬರುವ ಸಮು ಚಿತ ಪದ ಪ್ರವಾಹವು ಸಹೃದಯರ ಜೀವನಾಡಿಗಳಲ್ಲಿ ಪ್ರವಹಿಸಿ ಹೇಡಿಯನ್ನೂ ವೀರರನ್ನಾಗಿಸುತ್ತದೆ. ಮುರಾರಿಯಲ್ಲಿ ನಾವು ನೋಡುವುದು ಶಬ್ದಾಡಂಬರ ಮಾತ್ರ. ಒಂದೆರಡು ಉದಾಹರಣೆ ಗಳನ್ನು ಪರಿಕಿಸುವ ;

೧ ರಾವಣನು ಸೀತೆಯನ್ನು ಯಾಚಿಸುವುದು ನ್ಯಾಯ ವೆಂಬ ವಿಷಯದಲ್ಲಿ ಭವಭೂತಿ ಹೇಳಿದ್ದಾನೆ.

ಭವಭೂತಿ :

ಕನ್ಯಾರತ್ನ ಮಯೋನಿಜನ್ಮ ಭವತಾಮಾಸ್ತೇ ವಯಂ ಚಾರ್ಥಿನೊ
ರತ್ನಂ ಚೇತ್ಕ್ವಚಿದಸ್ತಿ ತತ್ಪರಿಣಮತ್ಯಸ್ಮಾಸು ಶಕ್ರಾದಪಿ।
ಕನ್ಯಾಯಾಶ್ಚ ಪರಾರ್ಥತೈವ ಹಿ ಮತಾ ತಸ್ಯಾಃ ಪ್ರದಾನಾದಹಂ
ಬಂಧುರ್ವೋ ಭವಿತಾ ಪುಲಸ್ತ್ಯ ಪುಲಹಾಪ್ರ ಪ್ರಾಶ್ಚ ಸಂಬಂಧಿನ॥
(೧–೩೦)

ರಾವಣನು ತನ್ನ ಪುರೋಹಿತನಾದ ಸರ್ವಮಾಯನೆಂಬ ವೃದ್ಧರಾಕ್ಷಸನನ್ನು ಜನಕನಲ್ಲಿಗೆ ಕಳಿಸಿ ತನಗೆ ಸೀತೆಯನ್ನು ಯಾಚಿಸುವ ರೀತಿಯಿದು 'ನಿಮ್ಮಲ್ಲಿ ಅಯೋನಿಜೆಯೆನಿಸಿದ ಕನ್ಯಾರತ್ನವಿದೆ. ನಾವು ಅರ್ಥಿಗಳು. ರತ್ನವೆಂಬುದು ಎಲ್ಲಿಯೇ ಇರಲಿ, ಕಡೆಗೆ ಅದು ಇಂದ್ರನಲ್ಲಿದ್ದರೂ ನಮಗೇ ಸೇರತಕ್ಕದ್ದು. ಕನ್ಯೆ ಎಂದಮೇಲೆ ಅದಿರುವುದು ಪರಾರ್ಥಕ್ಕಾಗಿಯೇ! ಅಂದ ಮೇಲೆ ಆ ಕನ್ಯೆಯನ್ನು ನಮಗೆ ಕೊಟ್ಟಪಕ್ಷದಲ್ಲಿ ಬ್ರಹ್ಮನ ಪ್ರಪೌತ್ರನಾದ ನಾನು ಕ್ಷತ್ರಿಯರಾದ ನಿಮಗೆ ಬಂಧುವಾಗುತ್ತೇನೆ. ಪುಲಸ್ಯ ಮುಂತಾದವರೆಲ್ಲ ಸಂಬಂಧಿಗಳಾಗುತ್ತಾರೆ.

ಮುರಾರಿ :

ದಾತವ್ಯೇಯಮವಶ್ಯಮೇವ ದುಹಿತಾ ಕಸ್ಮೈಚಿದೇನಾಮಸೌ
ದೋರ್ಲೀಲಾಮುಷ್ಟಿತೀಕೃತತಿಭುವನೋ ಲಂಕಾಪತಿ
ರ್ಯಾಚತೇ।
ತತ್ಕಿಂ ಮೂಢವದೀಕ್ಷಸೇ ನನು ಕಥಾಗೋಷ್ಠೀಷು ನಃ ಶಾಸತಿ

ತ್ವದ್ವೃತ್ತಾನಿ ಪರೋರಜಾಂಸಿ ಮುನಯಃ ಪ್ರಾಚ್ಯಾಮರೀ
ಚ್ಯಾದಯಃ ॥
(೩-೪೪)

ರಾವಣ ಪುರೋಹಿತನಾದ ಶೌಷ್ಕಲನು ಜನಕನನ್ನು ಕುರಿತು ತನ್ನ ಸ್ವಾಮಿಗಾಗಿ ಸೀತೆಯನ್ನು ಯಾಚಿಸುವ ರೀತಿ :– ಮಗಳು ಎಂದಮೇಲೆ ಯಾವನಾದರೂ ಒಬ್ಬನಿಗೆ ಅವಶ್ಯ ವಾಗಿಯೂ ಕೊಡಲೇಬೇಕು. ಅಂದಮೇಲೆ ಮೂರು ಲೋಕ ಗಳನ್ನು ತನ್ನ ಭುಜಪರಾಕ್ರಮದಿಂದ ಗೆದ್ದಿರುವ ಲಂಕಾಧೀಶ್ವರನ್ನು ಅವಳನ್ನು ಯಾಚಿಸುತ್ತಿದ್ದಾನೆ. ಮೂಢನಂತೆ ಏಕೆ ನೋಡು ತ್ತಿದ್ದೀಯೆ ? ನಮ್ಮಲ್ಲಿ ನಡೆಯುವ ಗೋಷ್ಠಿಗಳಲ್ಲಿ ಪುರಾತನರೂ, ಮಹಾಸಾತ್ವಿಕೋತ್ತಮರೂ ಆದ ಮರೀಚಿ ಮೊದಲಾದವರು ನಿನ್ನ ಚಾರಿತ್ರ್ಯವನ್ನು ಹೇಳುತ್ತಿದ್ದಾರೆ. ಅಂದಮೇಲೆ ಅಂಥ ನೀನು ರಾವಣನನ್ನು ಬಿಟ್ಟು ಬೇರೆಯವರಿಗೆ ಸೀತೆಯನ್ನು ಕೊಡುವುದು ಉಚಿತವಲ್ಲ.

ಇಲ್ಲಿ ಇಬ್ಬರು ಕವಿಗಳ ಮಾತಿನಲ್ಲಿರುವ ಅಂತರವನ್ನು ಸಹೃದಯರು ಗುರುತಿಸಬಲ್ಲರು.

೨. ಬೀಭತ್ಸ ರಸ ನಿರೂಪಣೆಯಲ್ಲಿಯೂ ಭವಭೂತಿ ಯ ಕೈ ಮೇಲೆ. ತಾಟಕಿಯ ವರ್ಣನೆ :

ಅಂತ್ರಪ್ರೋತಬೃಹತ್ಕಪಾಲನಲಕಕ್ರೂರಕ್ವಣತ್ಕಂಕಣ
ಪ್ರಾಯಪ್ರೇಂಖಿತ ಭೂರಿಭೂಷಣರವೈರಾಘೋಷಯತ್ಯಂಬರಂ
ಪೀತಚ್ಛರ್ದಿತ ರಕ್ತಕರ್ದಮ ಘನಪ್ರಾಗ್ಭಾರ ಘೋರೋಲ್ಲಲ–
ದ್ವ್ಯಾಲೋಲಸ್ತನಭಾರಭೈರವವಪುರ್ದರ್ಪೋದ್ಧತಂ ಧಾವತಿ ॥
(೧–೩೫)

**ಮುರಾರಿಯು ತಾಟಕೀವರ್ಣನೆ :**

ನಿರ್ಮಜ್ಜಜ್ಜಕ್ಷರಂತರ್ಭ್ರಮದತಿ ಕಪಿಶಕ್ರೂರತಾರಾ ನರಾಸ್ಥಿ
ಗ್ರಂಥಿಂ ದಂತಾಂತರಾಲ ಗ್ರಥಿತಮವಿರತಂ ಜಿಹ್ವಯಾ
ಘಟ್ಟಯಂತಿ
ಧ್ವಾಂತೇऽಪಿ ವ್ಯಾತ್ತವಕ್ತ್ರಜ್ವಲದನಲಶಿಖಾಜರ್ಜರೇ ವ್ಯಕ್ತಕರ್ಮಾ
ನಿರ್ಮಾಂತೀ ಗೃಧ್ರರೌದ್ರೀಂ ದಿವಮುಪರಿ ಪರಿ ಕ್ರೀಡತೇ
ತಾಡಕೇಯಮ್
(೨–೫೪)

೩. ಅದ್ಭುತರಸಾಭಿವ್ಯಂಜನೆಯಲ್ಲಿ ಮುರಾರಿಯ ಶೈಲಿ ಸಪ್ಪೆ.

**ಭವಭೂತಿ :** ಪರಶುರಾಮನ ಮಾತು.

ಉತ್ಪತ್ತಿರ್ಜಮದಗ್ನಿತಃ ಸ ಭಗವಾನ್ ದೇವಃ ಪಿನಾಕೀ ಗುರುಃ
ಶೌರ್ಯಂ ಯತ್ತು ನ ತದ್ಗಿರಾಂ ಪಥಿನನು ವ್ಯಕ್ತಂ ಹಿ ತತ್ಕರ್ಮಭಿಃ
ತ್ಯಾಗಃ ಸಪ್ತಸಮುದ್ರಮುದ್ರಿತಮಹೀನಿರ್ವ್ಯಾಜದಾನಾವಧಿಃ
ಕ್ಷತ್ರಬ್ರಹ್ಮತಪೋನಿಧೇರ್ಭಗವತಃ ಕಿಂ ವಾ ನ ಲೋಕೋತ್ತರಮ್
(೨–೩೬)

**ಮುರಾರಿ :** ಶ್ರೀ ರಾಮನ ಮಾತು

ಆದೇಷ್ಟಾ ಭಗವಾನ್ ಭೃಗುರ್ಜನನಯೋರೌತ್ಪತ್ತಿಕಬ್ರಾಹ್ಮ
ಯೋಃ
ದೇವೋ ಧೂರ್ಜಟಿರಸ್ತ್ರಕರ್ಮಣಿ ಗುರುರ್ವೀರಂ ಚ
ದೂರೇ ಗಿರಾಂ ।
ಸಪ್ತದ್ವೀಪವತೀಂ ದಥದ್ಧುವಮಭಿಪ್ರೈಷಿದ್ದ್ವಿಜಾನ್ ಕಸ್ಯಪ–
ಪ್ರಾಯಾನಪ್ರತಿಮಾನುಭಾವ ಭವತೇ ಕಸ್ಮೈಚಿದಸ್ಮೈ ನಮಃ ॥
(೪–೯)

೪. ಭವಭೂತಿಯು ವಿಸ್ತಾರವಾಗಿ ಹೇಳಿದುದನ್ನು ಮುರಾರಿ ಸಂಗ್ರಹಿಸಿ ಹೇಳುತ್ತಾನೆ. ಕುಶಧ್ವಜನು ರಾಮ ಲಕ್ಷ್ಮಣರನ್ನು ನೋಡಿ

ಭವಭೂತಿ : (ಅಂಕ ೧.)

ಪ್ರಕೃತ್ಯಾ ಪುಣ್ಯಲಕ್ಷ್ಮೀಕೌ ಕಾವೇತೌ ಜ್ಞಾಯತೇ ತ್ವಿದಮ್
ರಾಜನ್ಯಬಾರಕೌ ನೂನಂ ಕೃತೋಪನಯನಾವಿತಿ ‖ ೧೬ ‖
ದ್ವಿತೀಯಸ್ಯ ವರ್ಣಸ್ಯ ಪ್ರಥಮಸ್ಯಾಶ್ರಮಸ್ಯ ಚ ।
ಅಹೋ ರಮ್ಯಾನಯೋರ್ಮೂರ್ತಿರ್ವಯಸೋ ನೂತನಸ್ಯ ಚ ‖
(೧೭)

ಮುರಾರಿ :

ಪುಣ್ಯಲಕ್ಷ್ಮೀಕಯೋಃ ಕೋಽಯಮನಯೋಃ ಪ್ರತಿಭಾಸತೇ।
ಮೌಂಜ್ಯಾದಿವ್ಯಂಜನಶ್ಯಾಂತೋ ವೀರೋಽಕರಣೋ ರಸಃ
(೩-೩೪)

೫. ಭವಭೂತಿ :

ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನು ಧಾವತಿ ‖
(ಉತ್ತರ ರಾಮಚರಿತೆ ೧-೧೦)

ಮುರಾರಿ :

ವಾಚಮೇಷಾಮೃಷೀಣಾಂ ಹಿ ಶಾಸ್ತ್ರಮೇವಾನುವರ್ತತೇ ‖
(೨-೫೮)

೬. ರಾಮನು ನಿರಾಯುಧನಾದ ವಾಲಿಯೊಂದಿಗೆ ಯುದ್ಧಮಾಡುವುದಿಲ್ಲವೆಂದಾಗ ವಾಲಿಯು ಉಕ್ತಿಯನ್ನು ಮುರಾರಿ ಚೆನ್ನಾಗಿ ಹೇಳಿದ್ದಾನೆ.

**ಭವಭೂತಿ:** ರಾಮನು ವಾಲಿಯನ್ನು ಕುರಿತು ನಿರಾಯುಧ ನಾದ ನಿನ್ನ ಮೇಲೆ ಹೇಗೆ ಶಸ್ತ್ರಪ್ರಯೋಗ ಮಾಡುವುದು" ಎಂದಾಗ ವಾಲಿಯ ಮಾತು (೫-೫೧)

ಜ್ಞಾತಾ ಏವ ವಯಂ ಜಗತ್ಸು ಚರಿತ್ರೈರ್ಪಾಗ್ಭಿ: ಕಿಮಾಖ್ಯಾಯತೇ
ಸಂಯುತ್ತೋಭವ ಸತ್ಯಮಸ್ತಿ ಭವತಃ ಸತ್ಯಂ ಮನುಷ್ಯೋ
ಭವಾನ್ ।

ಮನುಷ್ಯರಾದ ನಿಮಗೆ ಆಯುಧಗಳ ಹಂಗು ವಾನರರಾದ ನಮಗೆ ಗುಡ್ಡಗಳೇ ಆಯುಧಗಳು.

**ಮುರಾರಿ:** ವಾಲಿ (೫-೪೪)

ನಯೋ ಹಿ ಸಾಂಗ್ರಾಮಿಕ ಏಷ ದೋಷ್ಮತಾಂ ।
ಯದಾತ್ಮ ಜಾತಿ ಪ್ರತಿಬದ್ಧ ಮಾಯುಧಮ್ ॥
ಅಯಃ ಕುಶೀಭಿಃ ಕಪಯೋ ನ ಶಸ್ತ್ರಿಣ್
ತಲಂ ಚ ಮುಷ್ಟಿಶ್ಚ ನಖಾಶ್ಚ ಸಂತಿ ನಃ

ಯುದ್ಧ ನೀತಿಯಂತೆ ಬಾಹುಬಲಶಾಲಿಗಳಿಗೆ ಭುಜವೇ ಆಯುಧ.ವಾನರರಾದ ನಮಗೆ ಕಲ್ಲು ಮುಷ್ಟಿಗಳೇ ಆಯುಧಗಳು.

ಮುರಾರಿಯು ಎಷ್ಟು ಪ್ರತಿಜ್ಞೆಮಾಡಿದರೂ ಈತನ ಕಾವ್ಯದಲ್ಲಿ ಪ್ರಾಚೀನ ಕವಿಗಳ ಉಕ್ತಿಗಳು ಪ್ರತಿಬಿಂಬಿಸದೆ ಹೋಗಿಲ್ಲ.

**ಕಾಳಿದಾಸ:**

" ರಿಕ್ತಸ್ಸರ್ವೋ ಭವತಿ ಹಿ ಲಘುಃ ಪೂರ್ಣತಾ ಗೌರವಾಯ "
(ಮೇಘ. ಸಂ. ೧.೨೦.)

" ಖಾಲಿಯಾದುದೆಲ್ಲವೂ ಹಗುರ. ಗೌರವ (ಗುರುತ್ವ) ಕ್ಕೆ ತುಂಬಿರಬೇಕು :

**ಮುರಾರಿ :**

" ಪೂರ್ಣತ್ವಾದತಿರಿಚ್ಯತೇ ಹಿ ಮಹತಸ್ತುಚ್ಛಸ್ಯ ದುರ್ಲಂಘ್ಯತಾ "
(ಅ.ರಾ. ೭-೮೪)

**ವಿಶಾಖದತ್ತ** [ಮುದ್ರಾರಾಕ್ಷಸ]

" ದಾಹ್ಯಾ ಭಾವಾನ್ನ ಕೀದಾ ಜ್ವಲನ ಇವ ವನೇ ಶಾಮ್ಯತಿ
ಕ್ರೋಧವಹ್ನಿಃ "
(೧-೧೧)

" ಕಾಡಿನಲ್ಲಿ ದಾವಾಗ್ನಿಯು ಉರವಲ [ಸೌದೆ] ವೇ ಇಲ್ಲದಾಗ ತಾನಾಗಿಯೇ ಉಪಶಮನವಾಗುತ್ತದೆ "

**ಮುರಾರಿ :**

" ಅರಣ್ಯೋಽಗ್ನಿರಿವ ದುಸ್ಸಹ ದುಃಖಾಮರ್ಷಜಂ ತೇಜೋ
ವಿಕ್ರಮಯತಿ "
(ಅ. ರಾ. ಪು. ೧೫೪. ಅಂ.೪)

ಮುಂತಾದವು ಅನ್ಯಕವಿಗಳಿಂದ ಸ್ವೀಕೃತವಾಗಿವೆ.

## ಗಾದೆಗಳು

ಮುರಾರಿಯು ಅನೇಕ ಲೋಕೋಕ್ತಿಗಳನ್ನು ನಿರಾಯಾಸವಾಗಿ ಉಪಯೋಗಿಸಿದ್ದಾನೆ. ಆದರೆ ಅವುಗಳಲ್ಲಿ ಬಹುಭಾಗ ಪಂಡಿತವರ್ಗದಲ್ಲಿ ಬಳಕೆಯಲ್ಲಿರುವವುಗಳು.

೧. “ ನ ದ್ವಯೋಃ ತೃತೀಯೇನ ಭವಿತವ್ಯಂ ”

ಇಬ್ಬರು ಮಾತನಾಡುವಾಗ ಮೂರನೆಯವನು ಪ್ರವೇಶಿಸಬಾರದು.

೨. “ ಪ್ರಾಘುಣ ಹಸ್ತೇನ ಸರ್ಪಮಾರಣಮ್ ”

ಅತಿಥಿಯ ಕೈಯಿಂದ ಹಾವು ಕೊಲ್ಲಿಸುವುದು.

೩. “ ನಿರ್ವಾಣಂ ಹಿ ಸವಿತಾರಂ ತರಣಿಮಣಿರಪ್ಯನುನಿರ್ವಾತಿ ”

ಸೂರ್ಯಾಸ್ತವಾದ ಮೇಲೆ ಸೂರ್ಯಕಾಂತಮಣಿಯೂ ಕಾಂತಿಹೀನವಾಗುತ್ತದೆ.

೪. “ ಯಾವದ್ದ್ರವ್ಯಭಾವೀ ಗುಣೋ ಹಿ ವಿಜಿಗೀಷೂಣಾಮುದಾತ್ತತಾ ”

ದ್ರವ್ಯವಿರುವವರೆಗೂ ಗುಣವಿರುವಂತೆ ವಿಜಿಗೀಷುಗಳಲ್ಲಿ ಉದಾತ್ತತೆಯಿರುತ್ತದೆ.

೫. “ ಅತಿದುಃಖೋ ನಿರ್ದುಃಖಂ ”

ನಿತ್ಯ ಸಾಯುವವರಿಗೆ ಅಳುವವರಾರು ?

೬. “ ತ್ರಿಶಂಕೋರುಪಭೋಗಾಯ ನದ್ಯೌರಪಿ ನ ಭೂರಪಿ ”

ತ್ರಿಶಂಕುವಿಗೆ ಅತ್ತ ಸ್ವರ್ಗವೂ ಇಲ್ಲ ; ಇತ್ತ ಭೂಮಿಯೂ ಇಲ್ಲ.

೭. “ ಕಷ್ಟಾ ವೇಧವ್ಯಥಾ ಕಷ್ಟೋಽನಿತ್ಯಮುದ್ವಹನ
ಕ್ಲಮಃ |
ಶ್ರವಣಾನಾಮಲಂಕಾರಃ ಕಪೋಲಾಸ್ಯೈವ ಕೇವಲಮ್ ||
(೧-೪೦)

ಕರ್ಣಕುಂಡಲ ಧರಿಸಲು ಕಿವಿಗೆ ಚುಚ್ಚಿಸಿಕೊಂಡ ಕಷ್ಟ ಒಂದು, ನಿತ್ಯವೂ ಅದನ್ನು ಹೊರುವ ಕಷ್ಟ ಮತ್ತೊಂದು. ಆದರೆ ಕುಂಡಲ ಹೊತ್ತ ಶ್ರಮ ಕಿವಿಗೆ, ಅವುಗಳ ಅಲಂಕಾರ ಕಪೋಲಕ್ಕೆ.

೮. “ ಕ್ವಚಿತ್ ಸಾಂಕ್ರಾಮಿಕೋಽಪಿ ವಿಶೇಷೋ ನೈಸರ್ಗಿಕಮತಿಶೇತೇ || ”

ಕೆಲವು ಸಲ ಕೃತಕ (Artificial) ಸೌಂದರ್ಯವು ನೈಸರ್ಗಿಕ [ಸ್ವಾಭಾವಿಕ] ವಾದುದನ್ನು ಮೀರಿಸುತ್ತದೆ.

೯. “ ಮಹಾಮುನೇರಸ್ಯ ಗಿರಾ ಕೃತೋಽಪಿ ಸ್ತ್ರೈಣೋ ವಧೋ ಮಾಂ ನ ಸುಖಾಕರೋತಿ ”

ರಾಮನು ತಾಟಕಿಯನ್ನು ಕೊಂದಾಗ ಹೇಳುವಮಾತು_ “ ಮಹರ್ಷಿಯ ಮಾತಿನಂತೆ ನಾನು ಇವಳನ್ನು ಕೊಂದಿರುವೆನಾದರೂ ಸ್ತ್ರೀವಧೆಯು ನನ್ನ ಮನಸ್ಸಿಗೆ ಅಷ್ಟು ಹಿತವನ್ನುಂಟು ಮಾಡುತ್ತಿಲ್ಲ.

೧೦. ಶೂರ್ಪಣಖಿಯು ರಾಮಲಕ್ಷ್ಮಣರ ಸೌಂದರ್ಯಕ್ಕೆ ಮುಗ್ಧಳಾಗಿ ಅಂದುಕೊಳ್ಳುವಳು :_ ಗುಣಗಳ ಸ್ವಭಾವವೇ

ಅಂಥಹುದು. ಆ ಗುಣವು ಶತ್ರುವಿನಲ್ಲಿಯೇ ಇದ್ದರೂ ಕೂಡ ಸುಖವನ್ನುಂಟುಮಾಡುತ್ತದೆ.

೧೧. "ಪರಿಪೂರ್ಣಗುಣೈನಃ ಯಸ್ಮಿನ್ ಕಸ್ಮಿನ್ ಅಪಿ ಶೋಭಂತೆ. ಕ್ಷೀಣಾಃ ಪುನಃ ಶೀರ್ಷವಾರೋಹಂತೀತಿ ಹರಜಟಾ ಚಂದ್ರ ಏವ ಪ್ರಥಮಂ ನಿದರ್ಶನಂ"

ಗುಣವಂತರು ಎಲ್ಲಿದ್ದರೂ ಶೋಭಿಸುತ್ತಾರೆ. ಅವರು ಕ್ಷೀಣರಾಗಿದ್ದರೂ ಸಹ ಶಿರೋಮಣಿಯಂತೆ ಪ್ರಕಾಶಿಸುವರೆಂಬುದಕ್ಕೆ ಶಿವನ ಜಡೆಯನ್ನೇರಿರುವ ಚಂದ್ರಕಲೆಯೇ ನಿದರ್ಶನ.

## ಅಪೂರ್ವ ಪದಪ್ರಯೋಗಗಳು

ಮುರಾರಿಯು ಪಂಡಿತರಿಗೆ ಅಚ್ಚುಮೆಚ್ಚಾಗಲು ಅವನ ಅಪೂರ್ವಪದ ಪ್ರಯೋಗಗಳೇ ಕಾರಣವೆಂದು ಹೇಳಲಾಗಿದೆ ಹಿಂದೆ ಭಟ್ಟಿಯು ಇಡಿಯ ವ್ಯಾಕರಣ ಶಾಸ್ತ್ರ ಪ್ರಕ್ರಿಯೆಯನ್ನೇ ರಾಮಾಯಣ ರೂಪದಲ್ಲಿ 'ಭಟ್ಟೀಕಾವ್ಯ' ಎಂಬ ಹೆಸರಿನಿಂದ ಬರೆದು ಪ್ರಸಿದ್ಧಿ ಪಡೆದನು. ವಿಶ್ವಾನಾಥನು ತರ್ಕಶಾಸ್ತ್ರವನ್ನು ರಾಜೀವನೆಂಬ ಶಿಷ್ಯನಿಗೆ ಕಾರಿಕಾರೂಪವಾಗಿ ಹೇಳಿದನು. ಶಾಸ್ತ್ರ ಪ್ರಕ್ರಿಯೆಯು ಕಾವ್ಯರೂಪವಾಗಿದ್ದರೆ ಸುಲಭವಾಗಿ ತಿಳಿಯುತ್ತದೆ ಯೆಂಬ ಅರ್ಥದಲ್ಲಿಯೇ ಮುರಾರಿಯ ಕೃತಿಯೂ ರಚಿತವಾಗಿದೆ. ಪ್ರಕೃತ ಪಂಡಿತರು ಮಾತ್ರ ಅಭಿನಂದಿಸಬೇಕಾದ ಕೆಲವು ಪದ ಪ್ರಯೋಗಗಳನ್ನಿಲ್ಲಿ ಕೊಡಲಾಗಿದೆ.

‘ ತಾರಾ ಮೈತ್ರೀ (ಸ್ವಾಭಾವಿಕ ಪ್ರೀತಿ) ‘ ಏಕಲೋಷವಧ ’ ಇಬ್ಬರಿಗೆ ಜಗಳವಾದಾಗ ಯಾವನಾದರೊಬ್ಬನು ಮಡಿಯುವುದು ; ಎರಡು ಮಣ್ಣಿನ ಹೆಂಟೆಗಳನ್ನು ಪರಸ್ಪರ ಹೊಡೆದಾಗ ಒಂದು ಒಡೆಯುವಂತೆ.

‘ಸೂರ್ಯೋಢ’ [ಸಾಯಂಕಾಲ] ‘ಬಾಂಧಕಿನೇಯ’ [ಕುಲಟಾ ಪುತ್ರ] ‘ವಾವದೂಕ’ [ಸದೃಶ] ‘ಆಂಡೀರ’ [ಬಾಲಕ] ‘ಗೋಕರ್ಣತರ್ಣ’ [ಜಿಂಕೆಯಮರಿ] ‘ಏಕ ತುಲಾಯುದ್ಧ [ದ್ವಂದ್ವ ಕಲಹ] ‘ಕರ್ಣೀರಥ’ [ಸ್ತ್ರೀಯರು ಕೂಡುವ ರಥ] ಇತ್ಯಾದಿ.

ಸುಲಭವಾಗಿ ಹೇಳಬೇಕಾದುದನ್ನು ಸುತ್ತಿಹೇಳುವುದು :– ‘ ಭಯಂಕರ ಧ್ವನಿ ’ ಎಂಬುದನ್ನು ಕಪಟಿಕಂಠೀರವವೈಕುಂಠಕಂಠಕಠೋರಕೋಲಾಹಲಃ ಎಂದೂ, ‘ಶಿವಧನುಸ್ಸು. ಎಂಬುದನ್ನು “ ಕಾತ್ಯಾಯನೀ ಕಾಮುಕ ಕಾರ್ಮುಕ ” ಎಂದು ಮುಂತಾಗಿಯೂ ಪ್ರಯೋಗಿಸುತ್ತಾನೆ. ಇದರಿಂದ ಇವನ ಶೈಲಿ ಶರಧಿಗಂಭೀರ. ಅಪರಿಚಿತ ಪದಗಳೆಂಬ ನಕ್ರಾದಿಗಳಿಂದ ಕರ್ಕಶ ಮತ್ತು ಕ್ರೂರ. ಸರಿಯಾದ ಪಂಡಿತನೂ ಒಂದೆರಡು ಸಲ ಓದಿದ ಹೊರತು ಅರ್ಥಾವಗತಿಯಾಗುವುದು ದುರ್ಲಭವೇ ! ಅದು ಗಂಭೀರೋದಾತ್ತ ವಸ್ತುವೇ ಸರಿ !

## ಉಪಸಂಹಾರ

ಒಟ್ಟಿನಲ್ಲಿ “ ಅನರ್ಘರಾಘವವು ಅನರ್ಘವಾದ ಮಾರ್ಗದಲ್ಲಿಯೇ ಕೊನೆಗೊಂಡಿದೆ. ಆದರೆ ಇಂತಹ ಅನರ್ಘವು ಎಲ್ಲರಿಗೂ

ದೊರೆಯಲಿಲ್ಲ. ದೊರೆಯುವುದು ಸಾಧ್ಯವೂ ಇಲ್ಲ. ಸುಲಭವಾಗಿರಬೇಕು ಎಂಬುದು ಕೊಂಚ ವಿಚಾರಮಾಡಬೇಕಾದ ಮಾತು. ಎಲ್ಲರಿಗೂ ಅರ್ಥವಾಗುವ ಹಾಗೆ ಬರೆಯುವುದು ಸಾಧ್ಯವೆ? ಎಲ್ಲರಿಗೂ ಅರ್ಥವಾಗುವ ಒಂದು ಗ್ರಂಥ ಜಗತ್ತಿನಲ್ಲಿದೆಯೆ?

ಜನದ ತಿಳಿವು ಅನೇಕ ಮಟ್ಟದ ಮೆಟ್ಟಲುಗಳಂತಿದೆಯೆಂಬುದು ಸುವ್ಯಕ್ತವಾದ ಅಂಶ. ಎಲ್ಲವೂ ಪ್ರಾಥಮಿಕ ದರ್ಜೆಯ ಸಾಹಿತ್ಯವಾದರೆ ಪ್ರೌಢ ತರಗತಿಗೆ ಲಕ್ಷ್ಯವಾವುದು? ಈ ದೃಷ್ಟಿಯಿಂದ ಮುರಾರಿಯ ಪರಿಶ್ರಮ ಸಮಂಜಸವಾಗಿದೆ. ಅವನ ದಾರಿಯು ಗಮನಾರ್ಹವಾಗಿದೆ. ಆತನು ತನ್ನ ಮೂರನೆಯ ಹಾದಿಯನ್ನು ಸೃಜಿಸಿದನಷ್ಟೇ ಅಲ್ಲ; ಅದನ್ನು ಸಮೀಚೀನವಾದ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದಾನೆ. ತನ್ನ ಪ್ರತಿಯೊಂದು ಉಕ್ತಿಯಲ್ಲಿಯೂ ಮೃದು ಹಾಸ್ಯವನ್ನು ತುಂಬಿ ಓದುಗರಿಗೆ ಉಲ್ಲಾಸವನ್ನುಂಟುಮಾಡುತ್ತಾನೆ.

ಭಾರತೀಯ ಸಾಹಿತ್ಯದಲ್ಲಿ ಶಿರೋಮಣಿಯಂತೆ ವಿರಾಜಿಸುವ ವ್ಯಂಗ್ಯಾರ್ಥ ಇವನಲ್ಲಿ ಒಂದು ರೀತಿಯಾಗಿ ಹರಿದಿದೆ. ಈ ವೈಶಿಷ್ಟ್ಯದ ವಿಷಯದಲ್ಲಿ ಮಾತ್ರ ಅವನಿಗಿರುವ ತೃತೀಯಮಾರ್ಗಗಾಮಿತ್ವ ಅನ್ವರ್ಥಕ. ಆದರೆ ಅದು ಉತ್ತಮ ಕಾವ್ಯಶ್ರೇಣಿಯಲ್ಲಿ ಸೇರುವುದೆಂದರೆ ಮಾತ್ರ ಭಿನ್ನಾಭಿಪ್ರಾಯಗಳು ಬಂದಾವು!